KA / BG-GPO / 2515 / WPP-47 / 2006-2008



# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**


| ಸಂಪುಟ ೧೪೧ | ಬೆಂಗಳೂರು, ಗುರುವಾರ, ಆಗಸ್ಟ್ ೩೧, ೨೦೦೬ (ಭಾದ್ರಪದ ೯, ಶಕ ವರ್ಷ ೧೯೨೮) | ಸಂಚಿಕೆ ೩೫ |
|---|---|---|


## ಭಾಗ - ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

**ಕಂದಾಯ ಸಚಿವಾಲಯ**

**ವಿಷಯ:** ಕರ್ನಾಟಕ ಸರ್ಕಾರ ಸಚಿವಾಲಯ ನೌಕರರ ಸಂಘ, ಬೆಂಗಳೂರು ಈ ಸಂಸ್ಥೆಗೆ ಚುನಾವಣೆ ನಡೆಸಲು ಆಡಳಿತಾಧಿಕಾರಿ ನೇಮಕ ಕುರಿತು.

**ಓದಲಾಗಿದೆ:** ಜಿಲ್ಲಾ ನೋಂದಣಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆ ಪತ್ರ ಸಂಖ್ಯೆ: ರಿ.ನಂ.117/1986–87, ದಿನಾಂಕ:24/03/2006.

**ಪ್ರಸ್ತಾವನೆ:-**

ಮೇಲೆ ಓದಲಾದ ಪತ್ರದಲ್ಲಿ ಜಿಲ್ಲಾ ನೋಂದಣಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆ ಇವರು ವರದಿ ಸಲ್ಲಿಸುತ್ತಾ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960 ರನ್ವಯ ನೋಂದಾಯಿಸಲಾದ ಸಂಘಗಳು ಸದರಿ ಕಾಯ್ದೆ ಕಲಂ 11 ರ ಪ್ರಕಾರ ಪ್ರತಿ ವರ್ಷ ಸರ್ವ ಸದಸ್ಯರ ಸಭೆ ಕರೆದು ಕಲಂ 12 ರ ಪ್ರಕಾರ ಸರ್ವ ಸದಸ್ಯರ ಸಭೆಯಲ್ಲಿ ಲೆಕ್ಕಪತ್ರ ಅನುಮೋದನೆ ಪಡೆದು ಕಾರ್ಯಕಾರಿ ಸಮಿತಿಗೆ ಬೈಲಾ ಪ್ರಕಾರ ಚುನಾವಣೆ ನಡೆಸಬೇಕು, ಕಲಂ 13 ರ ಪ್ರಕಾರ ಲೆಕ್ಕಪತ್ರ ಹಾಗೂ ಕಾರ್ಯಕಾರಿ ಸಮಿತಿ ಪಟ್ಟಿಯನ್ನು ಸರ್ವ ಸದಸ್ಯರ ಸಭೆ ನಡೆದ 14 ದಿನಗಳೊಳಗಾಗಿ ಸಂಘಗಳ ನೋಂದಣಾಧಿಕಾರಿಗೆ ಸಲ್ಲಿಸಬೇಕು. ಕಲಂ 11 (2) ರ ಪ್ರಕಾರ ಲೆಕ್ಕಪತ್ರ ವರ್ಷ ಪೂರ್ಣಗೊಂಡ 9 ತಿಂಗಳೊಳಗಾಗಿ ಸರ್ವ ಸದಸ್ಯರ ಸಭೆ ಕರೆಯಬೇಕು. ಈ ಕಾರಣಗಳಿಂದ ಕರ್ನಾಟಕ ಸರ್ಕಾರ ಸಚಿವಾಲಯ ನೌಕರರ ಸಂಘದ ಸರ್ವ ಸದಸ್ಯರ ಸಭೆಯನ್ನು ಆಡಳಿತ ಮಂಡಳಿಯವರು ಈಗಾಗಲೇ ನಡೆಸಬೇಕಾಗಿತ್ತು, ಸಂಘವು ಸರ್ವ ಸದಸ್ಯರ ಸಭೆ ಕರೆಯಲು ಹೆಚ್ಚಿನ ಅವಧಿ ಕೋರಿ ವಿಶೇಷ ಕಾರಣಗಳಿಂದ ಯಾವುದೇ ಅರ್ಜಿಯನ್ನು ಸಹ ಸಲ್ಲಿಸಿರುವುದಿಲ್ಲ. ಸಂಘದ ಪ್ರಧಾನ ಕಾರ್ಯದರ್ಶಿ ದಿನಾಂಕ: 02/02/2006 ರಂದು ಜಿಲ್ಲಾ ನೋಂದಣಾಧಿಕಾರಿಗಳಿಗೆ ಪತ್ರ ಬರೆದು ದಿನಾಂಕ:28/01/2006 ರಂದು ಸರ್ವ ಸದಸ್ಯರ ಸಭೆ ನಡೆಸಿರುವುದಾಗಿ ತಿಳಿಸಿದ್ದಾರೆ. ಆದರೆ ಸಭೆಯ ನಡವಳಿಯಲ್ಲಿ ಚುನಾವಣೆ ನಡೆದ ಬಗ್ಗೆ ಮಾಹಿತಿ ಇರುವುದಿಲ್ಲ.

ಕರ್ನಾಟಕ ಸರ್ಕಾರ ಸಚಿವಾಲಯ ನೌಕರರ ಸಂಘದ ಪದಾಧಿಕಾರಿಗಳು ಸೂಕ್ತ ಕಾಲದಲ್ಲಿ ಸರ್ವ ಸದಸ್ಯರ ಸಭೆ ಕರೆದು ಚುನಾವಣೆ ನಡೆಸಲು ವಿಫಲರಾಗಿರುತ್ತಾರೆ. 2002 ರಲ್ಲಿ ನಡೆದ ಕಾರ್ಯಕಾರಿ ಸಮಿತಿ ಚುನಾವಣೆ ಕುರಿತ ಮಾನ್ಯ ನ್ಯಾಯಾಲಯದಲ್ಲಿದ್ದ ಪ್ರಕರಣ ದಿನಾಂಕ:07/10/2005 ರಂದು ಆದೇಶವಾಗಿರುತ್ತದೆ. ಈ ಸಮಸ್ಯೆಯನ್ನು ಅಂತಿಮಗೊಳಿಸಲು ಇತ್ಯರ್ಥವಾಗಬೇಕಾದರೆ ಸಂಘಕ್ಕೆ ಆಡಳಿತಾಧಿಕಾರಿಗಳ ಮೂಲಕ ಚುನಾವಣೆ ನಡೆಸುವುದು ಸೂಕ್ತವೆಂದು ಜಿಲ್ಲಾ ನೋಂದಣಾಧಿಕಾರಿಗಳು ಅಭಿಪ್ರಾಯ ಪಟ್ಟಿರುತ್ತಾರೆ. ಜಿಲ್ಲಾ ನೋಂದಣಾಧಿಕಾರಿಗಳ ವರದಿಯನ್ನು ಕೂಲಂಕಷವಾಗಿ ಪರಿಶೀಲಿಸಿ ಕರ್ನಾಟಕ ಸರ್ಕಾರ ಸಚಿವಾಲಯ ನೌಕರರ ಸಂಘಕ್ಕೆ ಆಡಳಿತಾಧಿಕಾರಿಗಳ ಮೂಲಕ ಚುನಾವಣೆ ನಡೆಸುವುದು ಸೂಕ್ತವೆಂಬ ತೀರ್ಮಾನಕ್ಕೆ ಸರ್ಕಾರವು ಬಂದಿದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 4 ಮುನೊಸೊ 2003, ಬೆಂಗಳೂರು, ದಿನಾಂಕ: 26ನೇ ಮೇ 2006.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಕರ್ನಾಟಕ ಸಚಿವಾಲಯ ನೌಕರರ ಸಂಘ, ಬಹುಮಹಡಿಗಳ ಕಟ್ಟಡ, ಡಾ: ಅಂಬೇಡ್ಕರ್ ವೀಧಿ, ಬೆಂಗಳೂರು–01 ಈ ಸಂಸ್ಥೆಗೆ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960 ರ ಕಲಂ 27 -(A) (1) (b) ಪ್ರಕಾರ ಆಡಳಿತಾಧಿಕಾರಿಗಳ ಮೂಲಕ ಚುನಾವಣೆ ನಡೆಸಲು ಶ್ರೀ ಅಬ್ದುಲ್ ಖದೀರ್, ಅಪರ ಕಾರ್ಯದರ್ಶಿಗಳು, ಶಿಕ್ಷಣ ಇಲಾಖೆ, ಕರ್ನಾಟಕ ಸರ್ಕಾರ ಸಚಿವಾಲಯ, ಬಹುಮಹಡಿಗಳ ಕಟ್ಟಡ, ಬೆಂಗಳೂರು–01 ಇವರನ್ನು ಚುನಾವಣಾಧಿಕಾರಿಯನ್ನಾಗಿ 3 ತಿಂಗಳ ಅವಧಿಗೆ ಅಥವಾ ಸಂಸ್ಥೆಗೆ ಚುನಾವಣೆ ನಡೆಸಿ ಚುನಾಯಿತ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸುವವರೆಗೆ ಇದರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ನೇಮಿಸಿದೆ.

ಕರ್ನಾಟಕ ರಾಜ್ಯ ಪಾಲರ ಆಜ್ಞಾನುಸಾರ
ಮತ್ತು ಅವರ ಹೆಸರಿನಲ್ಲಿ,
**ಶಿವಲಿಂಗ**
ಪೀಠಾಧಿಕಾರಿ, ಕಂದಾಯ ಇಲಾಖೆ,
(ನೋಂದಣಿ ಮತ್ತು ಮುದ್ರಾಂಕ)

ಪಿ.ಆರ್. 871

**ವಿಷಯ:** ಕರ್ನಾಟಕ ಸರ್ಕಾರ ಸಚಿವಾಲಯ ನೌಕರರ ಸಂಘ, ಬೆಂಗಳೂರು ಈ ಸಂಸ್ಥೆಗೆ ಚುನಾವಣೆ ನಡೆಸಲು ಆಡಳಿತಾಧಿಕಾರಿ ನೇಮಕ ಕುರಿತು.

**ಓದಲಾಗಿದೆ:** (1) ಸರ್ಕಾರದ ಆದೇಶ ಸಂಖ್ಯೆ: ಕಂಇ 4 ಮುನೊಸೊ 2003 ದಿನಾಂಕ: 26–5–2006.

(2) ಇಡಿ/ಅಪರ ಕಾ/2/ಪ್ರಾ.ಪ್ರೌ.ಸೆ–206 ದಿನಾಂಕ: 29–5–2006.

**ಪ್ರಸ್ತಾವನೆ:-**

ಮೇಲೆ ಓದಲಾದ (1) ರ ದಿನಾಂಕ: 26–5–2006 ರ ಸರ್ಕಾರದ ಆದೇಶದಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯ ನೌಕರರ ಸಂಘ, ಬಹುಮಹಡಿ ಕಟ್ಟಡ, ಡಾ; ಅಂಬೇಡ್ಕರ್ ವೀದಿ, ಬೆಂಗಳೂರು–1 ಈ ಸಂಸ್ಥೆಗೆ ಚುನಾವಣೆ ನಡೆಸಲು ಮೂರು ತಿಂಗಳ ಅವಧಿಗೆ ಆಡಳಿತಾಧಿಕಾರಿಯನ್ನು ನೇಮಕ ಮಾಡಲಾಗಿತ್ತು. ಓದಲಾದ (2) ರಲ್ಲಿ ಆಡಳಿತಾಧಿಕಾರಿಯಾಗಿ ನೇಮಕಗೊಂಡಿದ್ದ ಶ್ರೀ ಅಬ್ದುಲ್ ಖದೀರ್, ಅಪರ ಕಾರ್ಯದರ್ಶಿ, ಶಿಕ್ಷಣ ಇಲಾಖೆ, ಕರ್ನಾಟಕ ಸರ್ಕಾರ ಇವರು ತಮ್ಮ ಕೆಲಸದ ಒತ್ತಡದಿಂದ ಆಡಳಿತಾಧಿಕಾರಿಯ ಕರ್ತವ್ಯ ನಿರ್ವಹಿಸಲು ಸಾಧ್ಯವಾಗುವುದಿಲ್ಲವೆಂದು ದಿನಾಂಕ: 29–5–2006 ರ ಪತ್ರದಲ್ಲಿ ವರದಿ ನೀಡಿದ್ದಾರೆ. ಸದರಿ ವರದಿಯನ್ನು ಪರಿಶೀಲಿಸಿ ಸರ್ಕಾರವು ಅವರ ಬದಲಿಗೆ ಬೇರೆ ಆಡಳಿತಾಧಿಕಾರಿಯನ್ನು ನೇಮಿಸಲು ತೀರ್ಮಾನಿಸಿದೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 4 ಮುನೊಸೊ 2003, ಬೆಂಗಳೂರು, ದಿನಾಂಕ: 14ನೇ ಜೂನ್ 2006.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಕರ್ನಾಟಕ ಸಚಿವಾಲಯ ನೌಕರರ ಸಂಘ, ಬಹುಮಹಡಿಗಳ ಕಟ್ಟಡ, ಡಾ: ಅಂಬೇಡ್ಕರ್ ವೀಧಿ, ಬೆಂಗಳೂರು–01 ಈ ಸಂಸ್ಥೆಗೆ ಚುನಾವಣಾಧಿಕಾರಿ ಹಾಗೂ ಆಡಳಿತಾಧಿಕಾರಿಯಾಗಿ ನೇಮಕ ಮಾಡಲಾಗಿದ್ದ ಶ್ರೀ ಅಬ್ದುಲ್ ಖದೀರ್, ಅಪರ ಕಾರ್ಯದರ್ಶಿಗಳು, ಶಿಕ್ಷಣ ಇಲಾಖೆ ಇವರ ಬದಲಿಗೆ ಶ್ರೀ ರಿಚರ್ಡ್ ಲೋಬೋ, ಸಹಾಯಕ ಪ್ರಾರೂಪಕಾರ ಮತ್ತು ಪದನಿಮಿತ್ತ ಉಪ ಕಾರ್ಯದರ್ಶಿ, ಸಂಸದೀಯ ವ್ಯವಹಾರ ಮತ್ತು ಶಾಸನ ರಚನೆ ಇಲಾಖೆ ಇವರನ್ನು ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960 ರ ಕಲಂ 27 -(A) (1) (b) ಪ್ರಕಾರ ಆಡಳಿತಾಧಿಕಾರಿಗಳ ಮೂಲಕ ಚುನಾವಣೆ ನಡೆಸಲು, ಇವರನ್ನು ಚುನಾವಣಾಧಿಕಾರಿಯನ್ನಾಗಿ 3 ತಿಂಗಳ ಅವಧಿಗೆ ಅಥವಾ ಸಂಸ್ಥೆಗೆ ಚುನಾವಣೆ ನಡೆಸಿ ಚುನಾಯಿತ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸುವವರೆಗೆ ಇದರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ನೇಮಿಸಿದೆ.

ಕರ್ನಾಟಕ ರಾಜ್ಯ ಪಾಲರ ಆಜ್ಞಾನುಸಾರ
ಮತ್ತು ಅವರ ಹೆಸರಿನಲ್ಲಿ,
**ಶಿವಲಿಂಗ**
ಪೀಠಾಧಿಕಾರಿ, ಕಂದಾಯ ಇಲಾಖೆ,
(ನೋಂದಣಿ ಮತ್ತು ಮುದ್ರಾಂಕ)

ಪಿ.ಆರ್. 951

**ವಿಷಯ:** ನೋಂದಣಿ ಮತ್ತು ಮುದ್ರಾಂಕ ಇಲಾಖೆಯ ಸದಲಗಾ ಉಪ ನೋಂದಣಿ ಕಛೇರಿಯನ್ನು ರೂ.10,40,000/– ಗಳಲ್ಲಿ ಕಟ್ಟಲು ಆಡಳಿತಾತ್ಮಕ ಮಂಜೂರಾತಿ ನೀಡಿ ಹೊರಡಿಸಿರುವ ಆದೇಶವನ್ನು ನವೀಕರಿಸುವ ಬಗ್ಗೆ.

**ಓದಲಾಗಿದೆ:** 1) ಬೆಳಗಾವಿ ಜಿಲ್ಲಾ ನೋಂದಣಾಧಿಕಾರಿಗಳ ಪತ್ರ ಸಂಖ್ಯೆ: ಕಟ್ಟಡ:01:05–06, ದಿನಾಂಕ:27.06.2005.

2) ನೋಂದಣಿ ಮಹಾಪರಿವೀಕ್ಷಕರು ಹಾಗೂ ಮುದ್ರಾಂಕಗಳ ಆಯುಕ್ತರವರ ಪತ್ರ ಸಂಖ್ಯೆ: ಬಿಎಲ್‌ಡಿ/6/01–02, ದಿನಾಂಕ:23.07.2005.

3) ಸರ್ಕಾರಿ ಆದೇಶ ಸಂಖ್ಯೆ: ಕಂಇ 543 ಮುನೋಮು 2005, ದಿನಾಂಕ:7.11.2005.

4) ನೋಂದಣಿ ಮಹಾಪರಿವೀಕ್ಷಕರು ಹಾಗೂ ಮುದ್ರಾಂಕಗಳ ಆಯುಕ್ತರವರ ಪತ್ರ ಸಂಖ್ಯೆ: ಬಿಎಲ್‌ಡಿ/7/01-02, ದಿನಾಂಕ:28.02.2006.

5) ಬೆಳಗಾವಿ ಜಿಲ್ಲೆಯ ಚಿಕ್ಕೋಡಿ ವಿಭಾಗದ ಲೋಕೋಪಯೋಗಿ ಇಲಾಖೆಯ ಕಾರ್ಯಪಾಲಕ ಅಭಿಯಂತರರು ಇವರ ಪತ್ರ ಸಂಖ್ಯೆ: ಲೋ.ಇ./ಲೆಶಾ/ಎಬಿ-1/ಅನುದಾನ/2005-06, ದಿನಾಂಕ:01.03.2006.

6) ಸರ್ಕಾರಿ ಆದೇಶ ಸಂಖ್ಯೆ: ಕಂಇ 88 ಮುನೋಮು 2006, ದಿನಾಂಕ:29.03.2006.

7) ನೋಂದಣಿ ಮಹಾಪರಿವೀಕ್ಷಕರು ಹಾಗೂ ಮುದ್ರಾಂಕಗಳ ಆಯುಕ್ತರವರ ಪತ್ರ ಸಂಖ್ಯೆ: ಬಿಎಲ್‌ಡಿ-7/2001-02, ದಿನಾಂಕ:22.04.2006.

ಪ್ರಸ್ತಾವನೆ:-

ಮೇಲೆ (1) ರಲ್ಲಿ ಓದಲಾದ ಬೆಳಗಾವಿ ಜಿಲ್ಲಾ ನೋಂದಣಾಧಿಕಾರಿಗಳ ಪತ್ರ ದಿನಾಂಕ: 27.06.2005 ರ ಪತ್ರದಲ್ಲಿ ಸದಲಗಾ ಉಪ ನೋಂದಣಿ ಕಛೇರಿಯ ಕಟ್ಟಡ ಬಾಡಿಗೆ ಕಟ್ಟಡದಲ್ಲಿ ಕಾರ್ಯ ನಿರ್ವಹಿಸುತ್ತಿದ್ದು, ಸದರಿ ಕಟ್ಟಡವು ಬಹಳ ಚಿಕ್ಕದಿದ್ದು, ನೋಂದಣಿಗಾಗಿ ಬರುವ ಸಾರ್ವಜನಿಕ ಹಿತದೃಷ್ಟಿಯಿಂದ ಹಾಗೂ ಆಡಳಿತಾತ್ಮಕ ಹಿತದೃಷ್ಟಿಯಿಂದ ಸದರಿ ಉಪ ನೋಂದಣಿ ಕಛೇರಿಗೆ ಶಾಶ್ವತವಾದ ಕಟ್ಟಡದ ಅವಶ್ಯಕತೆಯಿದೆ ಎಂದು ತಿಳಿಸಲಾಗಿದೆ. ಲೋಕೋಪಯೋಗಿ ಇಲಾಖೆಯವರು ಸದರಿ ಕಟ್ಟಡಕ್ಕೆ ಅಂದಾಜು ರೂ. 10,40,000/- ಗಳು ವೆಚ್ಚವಾಗುತ್ತದೆಂದು ತಿಳಿಸಿರುತ್ತಾರೆ.

2) ಮೇಲೆ (2) ರಲ್ಲಿ ಓದಲಾದ ನೋಂದಣಿ ಮಹಾಪರಿವೀಕ್ಷಕರು ಹಾಗೂ ಮುದ್ರಾಂಕಗಳ ಆಯುಕ್ತರವರ ದಿನಾಂಕ: 23.07.2005 ರ ಪತ್ರದಲ್ಲಿ 2005-06 ನೇ ಸಾಲಿನ ಆಯವ್ಯಯದಲ್ಲಿ ಇಲಾಖೆಯ ಕಟ್ಟಡಗಳಿಗಾಗಿ 2.00 ಕೋಟಿ ರೂಪಾಯಿಗಳು ಮೀಸಲಿಟ್ಟಿದ್ದು, ಅದರಲ್ಲಿ ಸದಲಗಾ ಉಪ ನೋಂದಣಿ ಕಛೇರಿ ಕಟ್ಟಡದ ನಿರ್ಮಾಣಕ್ಕಾಗಿ ತಗಲುವ ವೆಚ್ಚ ರೂ.10,40,000/- ಗಳ ಪ್ರಸ್ತಾವನೆಯನ್ನು ಬೆಳಗಾವಿ ಜಿಲ್ಲಾ ನೋಂದಣಾಧಿಕಾರಿಗಳ ಸಲ್ಲಿಸಿದ್ದು, ಇದಕ್ಕೆ ಆಡಳಿತಾತ್ಮಕ ಮಂಜೂರಾತಿ ನೀಡಲು ಶಿಫಾರಸ್ಸು ಮಾಡಿರುತ್ತಾರೆ.

3) ಮೇಲೆ (3) ರಲ್ಲಿ ಓದಲಾದ ದಿನಾಂಕ:7.11.2005 ರ ಸರ್ಕಾರಿ ಆದೇಶದಲ್ಲಿ ಬೆಳಗಾವಿ ಜಿಲ್ಲೆಯ ಸದಲಗಾ ಉಪ ನೋಂದಣಿ ಕಛೇರಿಯ ಕಟ್ಟಡಗಳಿಗಾಗಿ ಲೆಕ್ಕ ಶೀರ್ಷಿಕೆ 4059 ಅಡಿಯಲ್ಲಿ ಎರಡು ಕೋಟಿ ರೂಪಾಯಿಗಳನ್ನು ಮೀಸಲಿರಿಸಿರುವ ಹಣದಲ್ಲಿ ರೂ.10,40,000/- ಗಳಿಗೆ ಆಡಳಿತಾತ್ಮಕ ಮಂಜೂರಾತಿ ನೀಡಲಾಗಿದೆ.

4) ಮೇಲೆ (4) ರಲ್ಲಿ ಓದಲಾದ ನೋಂದಣಿ ಮಹಾಪರಿವೀಕ್ಷಕರು ಹಾಗೂ ಮುದ್ರಾಂಕಗಳ ಆಯುಕ್ತರವರ ದಿನಾಂಕ: 23.07.2005 ರ ಪತ್ರದಲ್ಲಿ ಆಡಳಿತಾತ್ಮಕ ಮಂಜೂರಾತಿ ನೀಡಿದ ಈ ಹಣವನ್ನು ಬಿಡುಗಡೆ ಮಾಡುವಂತೆಯೂ ಮತ್ತು ಸದರಿ ಆದೇಶದ ವಿವರಗಳನ್ನು ಎನ್.ಎಂ.ಸಿ.ಯಲ್ಲಿ ಲೋಡ್ ಮಾಡಲು ವಿನಂತಿಸಿಕೊಂಡಿರುತ್ತಾರೆ.

5) ಮೇಲೆ (5) ರಲ್ಲಿ ಓದಲಾದ ಪತ್ರ ದಿನಾಂಕ: 01.03.2006 ರಲ್ಲಿ ಚಿಕ್ಕೋಡಿ ವಿಭಾಗದ ಕಾರ್ಯಪಾಲಕ ಅಭಿಯಂತರರು ಈಗಾಗಲೇ ಟೆಂಡರ್ ಮೂಲಕ ಕಟ್ಟಡದ ಕೆಲಸವನ್ನು ಕಾಂಟ್ರಾಕ್ಟುದಾರರಿಗೆ ಕೊಡಲಾಗಿದ್ದು, ಕೆಲಸ ಪ್ರಾರಂಭಿಸಲಾಗಿದೆ ಎಂದು ವರದಿ ಮಾಡಿರುತ್ತಾರೆ. ಅದರಂತೆ ಈ ಹಣವನ್ನು ಡಿ.ಡಿ.ಮೂಲಕ ತಮ್ಮ ಹೆಸರಿಗೆ ನೀಡಲು ವಿನಂತಿಸಿರುತ್ತಾರೆ. ಹೀಗೆ ಪಡೆದ ಹಣವನ್ನು ಲೆಕ್ಕ ಶೀರ್ಷಿಕೆ 8782-00-102-1-00-PW-Remittance ಗೆ ಜಮಾ ಮಾಡಿ ಲೆಕ್ಕ ಶೀರ್ಷಿಕೆ 8443 ಠೇವಣಿ ವಂತಿಕೆಯ ಅಡಿ ಭರವಸೆ ಪತ್ರ ಪಡೆದು ಈ ಹಣವನ್ನು ವಿನಿಯೋಗಿಸಲಾಗುವುದು ಎಂದು ತಿಳಿಸಿರುತ್ತಾರೆ.

6) ಮೇಲೆ (6) ರಲ್ಲಿ ಓದಲಾದ ಸರ್ಕಾರಿ ಆದೇಶ ದಿನಾಂಕ: 29.03.2006 ರಲ್ಲಿ ಇಲಾಖೆಯ ಕಟ್ಟಡಗಳಿಗಾಗಿ ರೂ.2.00 ಕೋಟಿಗಳ ಅನುದಾನದಲ್ಲಿ 2005-06 ನೇ ಸಾಲಿಗೆ ಬೆಳಗಾವಿ ಜಿಲ್ಲೆಯ ಚಿಕ್ಕೋಡಿ ತಾಲ್ಲೂಕಿನ ಸದಲಗಾ ಉಪ ನೋಂದಣಿ ಕಛೇರಿ ಕಟ್ಟಡದ ನಿರ್ಮಾಣಕ್ಕಾಗಿ ರೂ.10,40,000/- ಗಳ ಅನುದಾನವನ್ನು ಬಿಡುಗಡೆ ಮಾಡಿ ಮಂಜೂರಾತಿ ಆದೇಶ ನೀಡಲಾಗಿದೆ.

7) ಮೇಲೆ (7) ರಲ್ಲಿ ಓದಲಾದ ಪತ್ರ ದಿನಾಂಕ: 22.04.2006 ರಲ್ಲಿ ಇಲಾಖೆಯ ಕಟ್ಟಡಗಳಿಗಾಗಿ ರೂ.2.00 ಕೋಟಿಗಳ ಅನುದಾನದಲ್ಲಿ 2005-06 ನೇ ಸಾಲಿಗೆ ಬೆಳಗಾವಿ ಜಿಲ್ಲೆಯ ಚಿಕ್ಕೋಡಿ ತಾಲ್ಲೂಕಿನ ಸದಲಗಾ ಉಪ ನೋಂದಣಿ ಕಛೇರಿ ಕಟ್ಟಡದ ನಿರ್ಮಾಣಕ್ಕಾಗಿ ರೂ.10,40,000/- ಗಳ ಅನುದಾನವನ್ನು ದಿನಾಂಕ: 29.03.2006 ರ ಆದೇಶದಲ್ಲಿ ಬಿಡುಗಡೆ ಮಾಡಿದ್ದು, ಸದರಿ ಅನುದಾನವನ್ನು 2005-06 ನೇ ಸಾಲಿನಲ್ಲಿ ಉಪಯೋಗಿಸಿಕೊಂಡಿರುವುದಿಲ್ಲವೆಂದು ತಿಳಿಸುತ್ತಾ, ಸದಲಗಾ ಉಪ ನೋಂದಣಿ ಕಛೇರಿ ಕಟ್ಟಡದ ನಿರ್ಮಾಣಕ್ಕಾಗಿ ತಗಲುವ ವೆಚ್ಚವನ್ನು ಕಾರ್ಯಪಾಲಕ ಅಭಿಯಂತರರ ಲೆಕ್ಕ ಶೀರ್ಷಿಕೆ 8782-00-1021-00 PW ಗೆ ಜಮಾ ಮಾಡಿ ಲೆಕ್ಕ ಶೀರ್ಷಿಕೆ 8443 ಠೇವಣಿ ವಂತಿಕೆ ಅಡಿ ಹಣವನ್ನು ಹಾಗೂ ಭರವಸೆ ಪತ್ರವನ್ನು ಪಡೆಯಲು ಈಗಾಗಲೇ ಮಂಜೂರಾತಿ ಮಾಡಿದ ರೂ.10,40,000/-ಗಳ ಅನುದಾನವನ್ನು 2006-07ನೇ ಸಾಲಿನ ಅನುದಾನದಲ್ಲಿ

ಬಿಡುಗಡೆ ಮಾಡಲು ದಿನಾಂಕ: 29.03.2006 ರಂದು ಈಗಾಗಲೇ ಹೊರಡಿಸಲಾದ ಆದೇಶವನ್ನು ಮಾರ್ಪಡಿಸಿ ಹೊಸ ಆದೇಶವನ್ನು ಹೊರಡಿಸಬೇಕೆಂದು ಕೋರಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 88 ಮುನೋಮು 2006, ಬೆಂಗಳೂರು, ದಿನಾಂಕ: 25ನೇ ಮೇ 2006.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಸದಲಗಾ ಉಪ ನೋಂದಣಿ ಕಛೇರಿ ಕಟ್ಟಡದ ನಿರ್ಮಾಣಕ್ಕಾಗಿ ದಿನಾಂಕ:29.03.2006 ರ ಆದೇಶದ ಮೇರೆಗೆ ರೂ.10,40,000/- (ರೂಪಾಯಿ ಹತ್ತು ಲಕ್ಷ ನಲವತ್ತು ಸಾವಿರ)ಗಳನ್ನು ಬಿಡುಗಡೆ ಮಾಡಿ ಆಡಳಿತಾತ್ಮಕ ಮಂಜೂರಾತಿ ನೀಡಿ ಹೊರಡಿಸಲಾಗಿದ್ದ ಆದೇಶವನ್ನು 2006-07 ನೇ ಸಾಲಿಗೆ ಈ ಮೂಲಕ ನವೀಕರಿಸಿ ಆದೇಶಿಸಲಾಗಿದೆ. ಉಳಿದಂತೆ ದಿನಾಂಕ:29.03.2006 ರ ಆದೇಶವನ್ನು ಪುನರುಚ್ಛರಿಸಲಾಗಿದೆ.

ಕರ್ನಾಟಕ ರಾಜ್ಯ ಪಾಲರ ಆಜ್ಞಾನುಸಾರ
ಮತ್ತು ಅವರ ಹೆಸರಿನಲ್ಲಿ,
**ಶಿವಲಿಂಗ**
ಪೀಠಾಧಿಕಾರಿ, ಕಂದಾಯ ಇಲಾಖೆ,
(ನೋಂದಣಿ ಮತ್ತು ಮುದ್ರಾಂಕ)

ಪಿ.ಆರ್. 872

## ಸಮಾಜ ಕಲ್ಯಾಣ ಸಚಿವಾಲಯ

**ವಿಷಯ:** ಗಂಗಾ ಕಲ್ಯಾಣ ಯೋಜನೆಯಡಿ ವೈಯಕ್ತಿಕ ನೀರಾವರಿ ಕೊಳವೆಬಾವಿ ಘಟಕ ವೆಚ್ಚವನ್ನು ಹೆಚ್ಚಿಸುವ ಬಗ್ಗೆ ಆದೇಶ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ಸಕಇ 170 ಎಸ್‌ಡಿಸಿ 01 ದಿನಾಂಕ: 22-03-02

2) ವ್ಯವಸ್ಥಾಪಕ ನಿರ್ದೇಶಕರು, ಡಾ:ಬಿ.ಆರ್.ಅಂಬೇಡ್ಕರ್ ಅಭಿವೃದ್ಧಿ ನಿಗಮ ಇವರ ಪತ್ರ ಸಂಖ್ಯೆ: ಡಾ.ಬಿ.ಆರ್.ಅಂ.ಅ.ನಿ:ಗಂಕಯೋ:ಪ್ರಸ್ತಾವನೆ:2006-07 :1097 ದಿನಾಂಕ:18-04-06

3) ದಿನಾಂಕ:31-05-06ರಂದು ನಡೆದ ಅಧಿಕಾರಯುಕ್ತ ಸಮಿತಿಯ ಸಭಾ ನಡವಳಿಗಳು

**ಪ್ರಸ್ತಾವನೆ:-**

ಮೇಲೆ ಓದಲಾದ (1)ರ ಸರ್ಕಾರದ ಆದೇಶದಲ್ಲಿ ಡಾ:ಬಿ.ಆರ್.ಅಂಬೇಡ್ಕರ್ ಅಭಿವೃದ್ಧಿ ನಿಗಮವು ಅನುಷ್ಠಾನ ಗೊಳಿಸುತ್ತಿರುವ ಗಂಗಾ ಕಲ್ಯಾಣ ವೈಯಕ್ತಿಕ ನೀರಾವರಿ ಕೊಳವೆಬಾವಿ ಯೋಜನೆಯಡಿಯಲ್ಲಿನ ಘಟಕ ವೆಚ್ಚವನ್ನು ರೂ.65,000/-ದಿಂದ 75,000/-ಕ್ಕೆ ಏರಿಸಲಾಗಿದೆ. ಹೆಚ್ಚುವರಿಯಾದ ರೂ.10,000/-ಗಳನ್ನು ಸಾಲವಾಗಿ ಪರಿಗಣಿಸುವುದು. ಅಲ್ಲದೆ ವಿದ್ಯುಚ್ಛಕ್ತಿ ನಿಗಮಕ್ಕೆ ಕಟ್ಟಬೇಕಾದ ಠೇವಣಿ ಮೊತ್ತವನ್ನು ಡಾ:ಬಿ.ಆರ್.ಅಂಬೇಡ್ಕರ್ ಅಭಿವೃದ್ಧಿ ನಿಗಮವೇ ಕಟ್ಟತಕ್ಕದ್ದು. ಈ ಹಣವನ್ನು ರೂ.10,000/- ಸಾಲದ ಮೊತ್ತದಲ್ಲಿಯೇ ಸೇರಿಸಿಕೊಳ್ಳತಕ್ಕದ್ದೆಂದು ಆದೇಶಿಸಲಾಗಿದೆ.

ಮೇಲೆ ಓದಲಾದ (2)ರ ಪತ್ರದಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಡಾ:ಬಿ.ಆರ್.ಅಂಬೇಡ್ಕರ್ ಅಭಿವೃದ್ಧಿ ನಿಗಮ, ಬೆಂಗಳೂರು ಇವರು ಅನುಷ್ಠಾನಗೊಳಿಸುತ್ತಿರುವ ಗಂಗಾ ಕಲ್ಯಾಣ ಯೋಜನೆಯಡಿಯಲ್ಲಿ ವೈಯಕ್ತಿಕ ನೀರಾವರಿ ಕೊಳವೆಬಾವಿ ಘಟಕ ವೆಚ್ಚವನ್ನು ಅಂತರ್ಜಲ ಕುಸಿತದಿಂದಾಗಿ ಹಾಗೂ ಇಂಧನ ಮತ್ತು ಉಕ್ಕಿನ ಬೆಲೆಗಳು ಏರಿಕೆ ಆದ ಕಾರಣ ಕೊಳವೆಬಾವಿ ಕೊರೆಯುವ ಮತ್ತು ಪಂಪ್ ಮೋಟಾರ್‌ಗಳ ವೆಚ್ಚ ಅಧಿಕಗೊಂಡಿದ್ದರಿಂದ ಸರ್ಕಾರವು ನಿಗದಿ ಪಡಿಸಿರುವ ಘಟಕ ವೆಚ್ಚ ರೂ.75,000/-ದಲ್ಲಿ ಈ ಯೋಜನೆಯನ್ನು ಅನುಷ್ಠಾನಗೊಳಿಸಲು ಸಾಧ್ಯವಾಗುತ್ತಿಲ್ಲವಾದ್ದರಿಂದಲೂ ಹಾಗೂ 2006-07ನೇ ಸಾಲಿನ ಆಯವ್ಯಯದಲ್ಲಿ ಗಂಗಾ ಕಲ್ಯಾಣ/ವೈಯಕ್ತಿಕ ಕೊಳವೆಬಾವಿ ಯೋಜನೆಯ ಘಟಕ ವೆಚ್ಚವನ್ನು ಈಗ ಇರುವ ರೂ.75,000/-ದಿಂದ ರೂ.1.00 ಲಕ್ಷಗಳಿಗೆ ಈ ಹಿಂದೆ ಇದ್ದ ಧನಸಹಾಯದ ಮಾದರಿಯಲ್ಲಿಯೇ ಹೆಚ್ಚಿಸಲು ಘೋಷಿಸಲಾಗಿರುವ ಹಿನ್ನೆಲೆಯಲ್ಲಿ ಘಟಕ ವೆಚ್ಚವನ್ನು ಗರಿಷ್ಟ ರೂ.1.00 ಲಕ್ಷಕ್ಕೆ ಹೆಚ್ಚಿಸಿ ಆದೇಶ ಹೊರಡಿಸುವಂತೆ ಕೋರಿರುತ್ತಾರೆ.

ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ ಹಾಗೂ ಅಭಿವೃದ್ಧಿ ಆಯುಕ್ತರ ಅಧ್ಯಕ್ಷತೆಯಲ್ಲಿ ದಿನಾಂಕ: 31-05-06ರಂದು ನಡೆದ ಅಧಿಕಾರಯುಕ್ತ ಸಮಿತಿಯ ಸಭೆಯಲ್ಲಿ ಈ ವಿಷಯವನ್ನು ಮಂಡಿಸ ಲಾಗಿದ್ದು, ಸಮಿತಿಯ ನಿರ್ಣಯ ಈ ಕೆಳಕಂಡಂತೆ ಇರುತ್ತದೆ.

> "ವಾರ್ಷಿಕ ಕನಿಷ್ಟ ಠೇವಣಿ ಮತ್ತು ಮಾಪಕ ಭದ್ರತಾ ಠೇವಣಿ 5 ಅಶ್ವ ಶಕ್ತಿಗೆ ರೂ.5,130/- ಮತ್ತು 7.5 ಅಶ್ವ ಶಕ್ತಿಗೆ ರೂ.7,290/- ಸೇರಿದಂತೆ ಹಾಲಿ ಇರುವ ಧನ ಸಹಾಯದ ಮಾದರಿಯಲ್ಲಿಯೇ ಯೋಜನೆಯನ್ನು ಅನುಷ್ಠಾನಗೊಳಿಸಲು ಹಾಗೂ ವಿದ್ಯುದ್ದೀಕರಣದ ಸಾವಿರಾರು ಪ್ರಕರಣಗಳಲ್ಲೂ ಸಹ ಸಮಾಜ ಕಲ್ಯಾಣ ಇಲಾಖೆ ಹಾಗೂ ಇಂಧನ ಇಲಾಖೆ ಸೇರಿ ಮೂರು ತಿಂಗಳೊಳಗಾಗಿ ಎಲ್ಲಾ ಪ್ರಕರಣಗಳಿಗೂ ವಿದ್ಯುದ್ದೀಕರಣ ಗೊಳಿಸಲು ಕ್ರಮ ಕೈಗೊಳ್ಳುವಂತೆ ತಿಳಿಸಲಾಯಿತು. ಅನುದಾನದ ಮೊತ್ತ ಈಗ ರೂ.86,000/- ಹಾಗೂ ಸಾಲದ ಮೊತ್ತ ರೂ.14,000/- ಆಗಿರುವುದರಿಂದ ಸಾಧ್ಯವಿರುವ ಕಡೆಗಳಲ್ಲೆಲ್ಲಾ ಸಹಾಯದ ಮಿತಿಯೊಳಗೆಯೇ ಯೋಜನೆಯನ್ನು ಪೂರ್ಣಗೊಳಿಸಲು ಕ್ರಮ ತೆಗೆದುಕೊಳ್ಳತಕ್ಕದ್ದು."

ಮೇಲ್ಕಂಡ ಹಿನ್ನೆಲೆಯಲ್ಲಿ ಈ ಕೆಳಕಂಡಂತೆ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಸಕಇ 152 ಎಸ್‌ಡಿಸಿ 02, ಬೆಂಗಳೂರು ದಿನಾಂಕ: 06ನೇ ಜೂನ್ 06**

ಡಾ:ಬಿ.ಆರ್.ಅಂಬೇಡ್ಕರ್ ಅಭಿವೃದ್ಧಿ ನಿಗಮವು ಅನುಷ್ಠಾನಗೊಳಿಸುತ್ತಿರುವ ಗಂಗಾ ಕಲ್ಯಾಣ/ ವೈಯಕ್ತಿಕ ನೀರಾವರಿ ಕೊಳವೆ ಬಾವಿ ಯೋಜನೆಯಡಿಯಲ್ಲಿ ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಘಟಕ ವೆಚ್ಚವನ್ನು ಗರಿಷ್ಟ ರೂ.75,000/-ಗಳಿಗೆ ನಿಗದಿಪಡಿಸಲಾಗಿದ್ದು, ಈ ವೆಚ್ಚವನ್ನು ಪರಿಷ್ಕರಿಸಿ ರೂ.1.00 ಲಕ್ಷಕ್ಕೆ (ರೂಪಾಯಿ ಒಂದು ಲಕ್ಷ ಮಾತ್ರ) ಹಾಲಿ ಇರುವ ಧನ ಸಹಾಯದ ಮಾದರಿಯಲ್ಲಿಯೇ ನೂತನ ಫಲಾನುಭವಿಗಳಿಗೆ 2006-07ನೇ ಆರ್ಥಿಕ ಸಾಲಿನಿಂದ ಜಾರಿಗೆ ಬರುವಂತೆ ಮಂಜೂರಾತಿ ನೀಡಿ ಹೆಚ್ಚಿಸಲಾಗಿದೆ. ಇದರಿಂದಾಗಿ ಈಗ ಪ್ರತಿ ಕೊಳವೆಬಾವಿಗೆ ರೂ.86,000/-ಗಳ ಸಹಾಯಧನ ಹಾಗೂ ರೂ.14,000/-ಗಳ ಸಾಲದ ರೂಪದಲ್ಲಿರುತ್ತದೆ. ಇದಲ್ಲದೆ ವಿದ್ಯುಚ್ಛಕ್ತಿ ಸರಬರಾಜು ನಿಗಮಕ್ಕೆ ಕಟ್ಟಬೇಕಾದ ಠೇವಣಿ ಮೊತ್ತವನ್ನು ಈ ಸಹಾಯಧನದ ಮಿತಿಯೊಳಗೆಯೇ ಡಾ:ಬಿ.ಆರ್.ಅಂಬೇಡ್ಕರ್ ಅಭಿವೃದ್ಧಿ ನಿಗಮವೇ ಭರಿಸತಕ್ಕದ್ದು.

ಮೇಲೆ ಆದೇಶಿಸಿದ ಅಂಶಗಳನ್ನು ಹೊರತುಪಡಿಸಿ ಗಂಗಾ ಕಲ್ಯಾಣ ಯೋಜನೆಯ ಇತರೆ ಷರತ್ತುಗಳು ಈ ಮೊದಲಿನಂತೆಯೇ ಅನ್ವಯಿಸತಕ್ಕದ್ದು.

ಈ ಆದೇಶವನ್ನು ದಿನಾಂಕ:31-05-06ರಂದು ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ ಮತ್ತು ಅಭಿವೃದ್ಧಿ ಆಯುಕ್ತರ ಅಧ್ಯಕ್ಷತೆಯಲ್ಲಿ ನಡೆದ ಅಧಿಕಾರಯುಕ್ತ ಸಮಿತಿಯ ಸಭಾ ನಡವಳಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 928

**ಎ.ಎಂ.ಚಿದಾನಂದಸ್ವಾಮಿ**

ಸರ್ಕಾರದ ಅಧೀನ ಕಾರ್ಯದರ್ಶಿ-II, ಸಮಾಜ ಕಲ್ಯಾಣ ಇಲಾಖೆ.

**ಒಳಾಡಳಿತ ಸಚಿವಾಲಯ**

**ವಿಷಯ:** ಶ್ರೀ ಪಿ.ಕೆ.ಕಾಂಬಳೆ, ಸಿಪಿಸಿ-1084, ಬೆಳಗಾವಿ ಜಿಲ್ಲೆ, ರವರ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:** 1) ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಬೆಳಗಾವಿ, ಇವರ ಆದೇಶ ಸಂಖ್ಯೆ: ಸಿಬ್ಬಂದಿ/2/ ಇವಿ-12/2002 ಆಪು ಸಂಖ್ಯೆ:677/2003, ದಿನಾಂಕ:11-03-2003.

2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಉತ್ತರ ವಲಯ, ಬೆಳಗಾವಿ, ಇವರ ಆದೇಶ ಸಂಖ್ಯೆ:ಅಪೀಲು/77/ಉವ/2003, ದಿನಾಂಕ:21-06-2003.

3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:14-06-2005.

4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು/2/112/2005, ದಿನಾಂಕ:08-12-2005.

**ಪ್ರಸ್ತಾವನೆ:-**

ಶ್ರೀ ಪಿ.ಕೆ.ಕಾಂಬಳೆ, ಸಿಪಿಸಿ-1084, ನಂದಗಡ ಪೊಲೀಸ್ ಠಾಣೆ, ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965ರ ನಿಯಮ 6ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:**

''ಆಪಾದಿತ ಪೊಲೀಸ್ ಅಧಿಕಾರಿ ಸಿಪಿಸಿ-1084 ಪಿ.ಕೆ.ಕಾಂಬಳೆ, ನಂದಗಡ ಠಾಣೆಯವರಾದ ನೀವು:-

1. FSL ಕರ್ತವ್ಯಕ್ಕೋಸ್ಕರ ಬೆಳಗಾವಿಯಿಂದ ದಿನಾಂಕ:09-05-2002ರಂದು ಬೆಂಗಳೂರಿಗೆ ಹೋಗಿ, ಅಲ್ಲಿ ಕರ್ತವ್ಯ ಮುಗಿದ ಕೂಡಲೇ ಮರಳಿ ಬರಲು ವಿಫಲರಾಗಿರುವಿರಿ.
2. ಬೆಂಗಳೂರು FSL ಕರ್ತವ್ಯದಿಂದ ದಿನಾಂಕ:13-05-2002ರಂದು ಬಿಡುಗಡೆ ಹೊಂದಿ, ಅಲ್ಲಿಂದ ಮರಳಿ ಬೆಳಗಾವಿಗೆ ಬರದೆ, ಕೋಲಾರ ಜಿಲ್ಲೆಯ ಮಾಲೂರು ಗ್ರಾಮಕ್ಕೆ ಹೋಗಿರುವಿರಿ;
3. ಬೆಂಗಳೂರಿನಿಂದ ಅಥವಾ ಕೋಲಾರ ಜಿಲ್ಲೆಯ ಮಾಲೂರಿನಿಂದ ನಂದಗಡ ಪೊಲೀಸ್ ಠಾಣಾಧಿಕಾರಿಗೆ ಯಾವುದೇ ಮುನ್ಸೂಚನೆಯನ್ನಾಗಲಿ, ನೀಡದೇ, ಯಾವುದೇ ಮಾಧ್ಯಮದಿಂದಾಗಲಿ ತಿಳಿಸದೇ ಹಾಗೆಯೇ ಸುಮ್ಮನೆ ಉಳಿದು ಅನಧಿಕೃತ ಗೈರು ಹಾಜರಾತಿಯನ್ನು ಮರೆ ಮಾಡಲು ಹೇಗೋ ಸಂಭಾಳಿಸಿಕೊಂಡು ವೈದ್ಯಕೀಯ ಪ್ರಮಾಣ ಪತ್ರವನ್ನು ಪಡೆದಿರುತ್ತೀರಿ;
4. ದಿನಾಂಕ:14-05-2002 ರಿಂದ 20-05-2002 ರವರೆಗೆ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರುಹಾಜರಿ ಉಳಿದಿದ್ದಲ್ಲದೆ, ನಂದಗಡ ಪೊಲೀಸ್ ಠಾಣೆ, ಅಧಿಕಾರಿಗೆ ಸುಳ್ಳು ಹೇಳಿ MHS ಪುಸ್ತಕವನ್ನು ಪಡೆದು ದಿನಾಂಕ:22-05-02 ರಂದು ಠಾಣೆಯಿಂದ ತೆರಳಿರುತ್ತೀರಿ.
5. ನಿಮ್ಮ ವೇತನಕ್ಕನುಗುಣವಾಗಿ ಸೌಲಭ್ಯವಿರುವ KSRTC ಬಸ್ಸಿನಲ್ಲಿ ಪ್ರಯಾಣಿಸದೇ, ಬೆಂಗಳೂರಿಗೆ ಹೋಗಿ ಬರಲು ಹೆಚ್ಚಿಗೆ ದರ ಇರುವ ಮತ್ತು ಸೌಲಭ್ಯ ಹೊಂದಿದ ಬಸ್ಸಿನಲ್ಲಿ ಪ್ರಯಾಣಿಸಲು ನಿಮಗೆ ನೀಡಿದ ಬಸ್ ವಾರೆಂಟ್ ಮೇಲೆ ಸೂಪರ್ ಡೀಲಕ್ಸ್ ಅಲೌಡ್ (allowed) ಎಂದು ನೀವೇ ಕೆಂಪು ಶಾಯಿಯಿಂದ ಬರೆದು, ಅಧಿಕಾರ ದುರುಪಯೋಗಪಡಿಸಿಕೊಂಡು, ದಿನಾಂಕ:09-05-2002ರಂದು ಮತ್ತು ದಿನಾಂಕ:19-05-2002ರಂದು ಪ್ರಯಾಣಿಸಿರುವಿರಿ.''

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಲು ದೋಷಾರೋಪಣಾ ಪತ್ರ ಹೊರಡಿಸಿದಾಗ ತನ್ನ ಮೇಲಿನ ಆರೋಪವನ್ನು ಬೇಶರತ್ತಾಗಿ ಒಪ್ಪಿಕೊಂಡಿದ್ದ ಕಾರಣ ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೋಲೀಸ್ ಅಧೀಕ್ಷಕರು, ಬೆಳಗಾವಿ, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ:11-03-2003ರ ಆದೇಶದಲ್ಲಿ ಅರ್ಜಿದಾರರನ್ನು ಸೇವೆಯಿಂದ ತೆಗೆದು ಹಾಕಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಉತ್ತರ ವಲಯ, ಬೆಳಗಾವಿ, ಇವರು ಮೇಲ್ಮನವಿಯನ್ನು ಪರಿಶೀಲಿಸಿ, ಅರ್ಜಿದಾರರ ಸೇವೆಯನ್ನು ಪರಿಗಣಿಸಿ, ತಮ್ಮ ನಡತೆ ಸುಧಾರಿಸಲು ಒಂದು ಅವಕಾಶ ನೀಡಿ, ಶಿಸ್ತು ಪ್ರಾಧಿಕಾರಿ ಆದೇಶವನ್ನು ಮಾರ್ಪಡಿಸಿ, ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ:21-06-2003ರ ಆದೇಶದಲ್ಲಿ ಮೇಲ್ಮನವಿಯನ್ನು ಪುರಸ್ಕರಿಸಿ, ಅರ್ಜಿದಾರರನ್ನು ಸೇವೆಯಲ್ಲಿ ಪುನರ್‌ಸ್ಥಾಪಿಸಿ, ಅವರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಮುಂಬರುವ ವಾರ್ಷಿಕ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರುವಂತೆ ಎರಡು ವರ್ಷಗಳ ಅವಧಿಗೆ ಮುಂದೂಡಿದ ಶಿಕ್ಷೆ ವಿಧಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರ ಮೇಲಿನ ಆರೋಪ- ಗಳನ್ನು ಅವರೇ ಬೇಶರತ್ತಾಗಿ ಒಪ್ಪಿಕೊಂಡಿರುತ್ತಾರೆ. ಶಿಸ್ತು ಪ್ರಾಧಿಕಾರಿ ಆರೋಪಗಳಿಗೆ ತಕ್ಕಂತೆ ದಂಡನೆ ವಿಧಿಸಿದ್ದರೂ ಮೇಲ್ಮನವಿ ಪ್ರಾಧಿಕಾರಿ ಅನುಕಂಪ ತೋರಿ ಶಿಸ್ತು ಪ್ರಾಧಿಕಾರಿ ಆದೇಶವನ್ನು ರದ್ದುಪಡಿಸಿ, ಅರ್ಜಿದಾರರನ್ನು ಸೇವೆಯಲ್ಲಿ ಪುನರ್‌ಸ್ಥಾಪಿಸಿರುವ ಕಾರಣ ಈ ದಂಡನಾ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 160 ಪೊಸಿಅ 2006 ಬೆಂಗಳೂರು ದಿನಾಂಕ:24ನೇ ಜೂನ್ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಪಿ.ಕೆ.ಕಾಂಬಳೆ, ಸಿಪಿಸಿ-1084, ಬೆಳಗಾವಿ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ದಿನಾಂಕ:14-06-05ರ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 985

**ಸಿ.ಬಸವರಾಜು**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು).

**ವಿಷಯ:** ಶ್ರೀ ಎಸ್.ಕೆ. ಪುಟ್ಟಪ್ಪ, ಮಾಜಿ ಪಿ.ಐ., ಕಡೂರು ವೃತ್ತ ಚಿಕ್ಕಮಗಳೂರು ಜಿಲ್ಲೆ, ಈ ಹಿಂದೆ ಬಳ್ಳಾರಿ ಜಿಲ್ಲೆ, ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಬಗ್ಗೆ.

**ಓದಲಾಗಿದೆ:** 1) ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಬಳ್ಳಾರಿ ಜಿಲ್ಲೆ, ಇವರ ಆದೇಶ ಸಂಖ್ಯೆ:107/ಪಿಆರ್/2001, ಓಬಿ ಸಂಖ್ಯೆ:485/2001-02, ದಿನಾಂಕ:04-02-2002.

2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಪೂರ್ವ ವಲಯ, ದಾವಣಗೆರೆ, ಇವರ ಆದೇಶ ಸಂಖ್ಯೆ:ಸಿಬ್ಬಂದಿ/2168/2002-03, ದಿನಾಂಕ:11-11-2002.

3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:26-11-2002

4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಸಿಬಿ/8/56/2002-03, ದಿನಾಂಕ:18-07-2003.

5) ಕರ್ನಾಟಕ ಲೋಕ ಸೇವಾ ಆಯೋಗದ ಪತ್ರ ಸಂಖ್ಯೆ:PSC / 38 / CNS / 06, ದಿನಾಂಕ:09-06-2006.

**ಪ್ರಸ್ತಾವನೆ:-**

ಶ್ರೀ ಎಸ್.ಕೆ.ಪುಟ್ಟಪ್ಪ, ಪೊಲೀಸ್ ಇನ್ಸ್‌ಪೆಕ್ಟರ್, ಡಿಎಸ್‌ಬಿ, ಬಳ್ಳಾರಿ ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965ರ ನಿಯಮ 7ರಡಿ ದೋಷರೋಪಣಾ ಪತ್ರ ಹೊರಡಿಸಲಾಗಿದೆ.

**ದೋಷರೋಪಣೆ:**

"ಹೊಸಹಳ್ಳಿ ಪೊಲೀಸ್ ಠಾಣೆ, ಗುನ್ನೆ ನಂ.13:96, ಸಿ.ಸಿ.ನಂ.:527:98ರಲ್ಲಿ ಸಾಕ್ಷಿ: 21 ಆದ ನಿಮಗೆ 5 ಬಾರಿ ವಾರೆಂಟ್ ಹೊರಡಿಸಿ, ನಿಮಗೆ ನಿಸ್ತಂತು ನೀಡಿ ತಿಳಿಸಿದರೂ, ನ್ಯಾಯಾಲಯಕ್ಕೆ ಹಾಜರಾಗದೇ, ಅತೀವ ಕರ್ತವ್ಯ ನಿರ್ಲಕ್ಷತನ ಮತ್ತು ಬೇಜವಾಬ್ದಾರಿತನ ತೋರಿರುವುದು."

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಬಳ್ಳಾರಿ ಜಿಲ್ಲೆ, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ:04-02-2002ರ ಆದೇಶದಲ್ಲಿ ಅರ್ಜಿದಾರರ ಮುಂದಿನ ಒಂದು ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರದಂತೆ ಮೂರು (3) ತಿಂಗಳುಗಳ ಕಾಲ ಮುಂದೂಡಿದ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಪೂರ್ವ ವಲಯ, ದಾವಣಗೆರೆ ಇವರು ಮೇಲ್ಮನವಿ ಅರ್ಜಿಯನ್ನು ವಿಳಂಬವಾಗಿ ಸಲ್ಲಿಸಿದ ಕಾರಣ ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ:11-11-2002ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನು ದೋಷಾರೋಪಣಾ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಗುನ್ನೆ ಸಂಖ್ಯೆ:13/96, ಕಲಂ 279, 337 IPC ಪ್ರಕರಣದ CC ಸಂಖ್ಯೆ:665/96 ಆಗಿದ್ದು, ಈ ಪ್ರಕರಣದಲ್ಲಿ ಶ್ರೀ ಎಸ್.ಕೆ.ಪುಟ್ಟಪ್ಪ, PI ರವರು ಸಾಕ್ಷಿದಾರರಾಗಿರುವುದಿಲ್ಲವೆಂದು ಹೊಸಹಳ್ಳಿ ಪೊಲೀಸ್ ಠಾಣೆ, ಗುನ್ನೆ ಸಂಖ್ಯೆ:13/98, ಕಲಂ 279, 338, 304 (ಎ) IPC ಆಧಾರ 134 (ಎ) (ಬಿ) IMV ಆಕ್ಟ್ ಪ್ರಕರಣದ CC ಸಂಖ್ಯೆ:527/98 ಆಗಿದ್ದು, ಸದರಿ ಪ್ರಕರಣದಲ್ಲಿ PI ಎಸ್.ಕೆ.ಪುಟ್ಟಪ್ಪ ರವರು ತನಿಖಾಧಿಕಾರಿಗಳಾಗಿದ್ದು, 5 ಬಾರಿ ವಾರೆಂಟ್, 5 ಬಾರಿ ರೇಡಿಯೋ ಸಂದೇಶ ಕಳುಹಿಸಿದ್ದರೂ, ನ್ಯಾಯಾಲಯಕ್ಕೆ ಹಾಜರಾಗಿಲ್ಲದಿರುವ ಕಾರಣ, ಡಿವೈ.ಎಸ್.ಪಿ., ಕೂಡ್ಲಗಿ ಉಪ ವಿಭಾಗ, ಇವರು ತಿಳಿಸಿದ್ದು, ಶಿಸ್ತು ಪ್ರಾಧಿಕಾರಿ ಅಂತಿಮ ಆದೇಶ ಹೊರಡಿಸುವಾಗ ಗುನ್ನೆ ಸಂಖ್ಯೆ:13/98 CC 527/98 ಎನ್ನುವ ಬದಲು ಗುನ್ನೆ ಸಂಖ್ಯೆ:13/96 CC ಸಂಖ್ಯೆ:527/98 ಎಂದು ನಮೂದಿಸಿರುವುದರಿಂದ, ಇವರ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಪುರಸ್ಕರಿಸಬಹುದೆಂದು ಪೊಲೀಸ್ ಅಧೀಕ್ಷಕರು, ಬಳ್ಳಾರಿ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ದಾವಣಗೆರೆ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ರವರು ಶಿಫಾರಸ್ಸು ಮಾಡಿರುತ್ತಾರೆ. ಈ ಹಿನ್ನೆಲೆಯಲ್ಲಿ ಅರ್ಜಿದಾರರಿಗೆ ಶಿಸ್ತು ಪ್ರಾಧಿಕಾರಿ ವಿಧಿಸಿರುವ ದಂಡನೆಯನ್ನು ರದ್ದುಪಡಿಸಿ, ವಾರ್ಷಿಕ ವೇತನ ಬಡ್ತಿಗಳನ್ನು ಸಕ್ರಮಗೊಳಿಸಲು ಸರ್ಕಾರವು ಉದ್ದೇಶಿಸಿ, ಕರ್ನಾಟಕ ಲೋಕ ಸೇವಾ ಆಯೋಗದ ಅನುಮೋದನೆ ಕೋರಲಾಗಿತ್ತು. ಕರ್ನಾಟಕ ಲೋಕ ಸೇವಾ ಆಯೋಗವು ದಿನಾಂಕ:09-06-2006ರ ತನ್ನ ಪತ್ರದಲ್ಲಿ ಸರ್ಕಾರದ ಪ್ರಸ್ತಾವನೆಗೆ ಸಹಮತಿ ನೀಡಿದೆ. ಅದರಂತೆ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 296 ಪೊಸಿಅ 2002 ಬೆಂಗಳೂರು ದಿನಾಂಕ:24ನೇ ಜೂನ್ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ದಿನಾಂಕ:04-02-2002ರ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಬಳ್ಳಾರಿ ಜಿಲ್ಲೆ, ಇವರ ದಂಡನಾದೇಶವನ್ನು ರದ್ದುಪಡಿಸಿ, ಶ್ರೀ ಎಸ್.ಕೆ. ಪುಟ್ಟಪ್ಪ, ಪೊಲೀಸ್ ಇನ್ಸ್‌ಪೆಕ್ಟರ್, ಕಡೂರು ವೃತ್ತ ಚಿಕ್ಕಮಗಳೂರು ಇವರು ಸರ್ಕಾರಕ್ಕೆ ಸಲ್ಲಿಸಿದ್ದ ದಿನಾಂಕ:26-11-2002ರ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಪುರಸ್ಕರಿಸಿ, ಅರ್ಜಿದಾರರ ವಾರ್ಷಿಕ ವೇತನ ಬಡ್ತಿಗಳನ್ನು ಸಕ್ರಮಗೊಳಿಸಿ, ಬಿಡುಗಡೆ ಮಾಡಿದೆ. ಈ ಆದೇಶವು ಶಿಸ್ತು ಪ್ರಾಧಿಕಾರಿ ಹೊರಡಿಸಿದ ಆದೇಶ ದಿನಾಂಕದಿಂದಲೇ ಜಾರಿಗೆ ಬರುತ್ತದೆ.

ಈ ಆದೇಶವನ್ನು ಕರ್ನಾಟಕ ಲೋಕ ಸೇವಾ ಆಯೋಗದ ದಿನಾಂಕ:09-06-2006ರ ಪತ್ರದಲ್ಲಿನ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1007

**ಸಿ.ಬಸವರಾಜು**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು).

**ವಿಷಯ:** ಶ್ರೀಮತಿ ಎನ್.ಎನ್.ಇಂದಿರಾ, ಎಸಿಪಿ, ಶೇಷಾದ್ರಿಪುರಂ ಉಪ ವಿಭಾಗ, ಬೆಂಗಳೂರು ರವರು ಸರ್ಕಾರಕ್ಕೆ ಸಲ್ಲಿಸಿರುವ ಮೇಲ್ಮನವಿ ಅರ್ಜಿಯ ಬಗ್ಗೆ.

**ಓದಲಾಗಿದೆ:** 1) ಶಿಸ್ತು ಪ್ರಾಧಿಕಾರಿ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ಇವರ ಆದೇಶ ಸಂಖ್ಯೆ:ಸಿಬಿ/5/13/2005-06, ದಿನಾಂಕ:05-05-2005.

2) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:03-08-2005

3) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಸಿಬಿ/5/15/2001-02, ದಿನಾಂಕ:29-08-2005.

4) ಕರ್ನಾಟಕ ಲೋಕ ಸೇವಾ ಆಯೋಗದ ಪತ್ರ ಸಂಖ್ಯೆ:ಪಿಎಸ್‌ಸಿ 14 / CNS / 2006, ದಿನಾಂಕ: 09-05-2006.

**ಪ್ರಸ್ತಾವನೆ:-**

ಶ್ರೀಮತಿ ಎನ್.ಎನ್.ಇಂದಿರಾ, ಸಹಾಯಕ ಪೊಲೀಸ್ ಆಯುಕ್ತರು, (ಎಸಿಪಿ) ಶೇಷಾದ್ರಿಪುರಂ, ಉಪ ವಿಭಾಗ, ಬೆಂಗಳೂರು, ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965ರ ನಿಯಮ 7ರಡಿ ದೋಷರೋಪಣಾ ಪತ್ರ ಹೊರಡಿಸಲಾಗಿದೆ.

**1.ದೋಷರೋಪಣೆ:**

''ಚೀನಾದ ಘನವೆತ್ತ ಪ್ರಧಾನ ಮಂತ್ರಿಯವರಾದ ವೆನ್ ಜಿಯಾಬೋರವರು ನಿಮ್ಮ ವ್ಯಾಪ್ತಿಗೆ ಬರುವ ಬೆಂಗಳೂರಿನ ಭಾರತೀಯ ವಿಜ್ಞಾನ ಸಂಸ್ಥೆಗೆ ದಿನಾಂಕ:10-04-2005 ರಂದು ಮಧ್ಯಾಹ್ನ 2-30 ಗಂಟೆಗೆ ಭೇಟಿ ನೀಡಿದ ಸಂದರ್ಭದಲ್ಲಿ ನಿಮ್ಮ ಅಧೀನದಲ್ಲಿ ಸೇವೆ ಸಲ್ಲಿಸುತ್ತಿದ್ದ ಶ್ರೀ ಸುಬ್ರಮಣ್ಯ, ಪಿ.ಐ., ಸದಾಶಿವನಗರ, ಪೊಲೀಸ್ ಠಾಣೆ, ಬೆಂಗಳೂರು ರವರು ಸೂಕ್ತ ಬಂದೋಬಸ್ತ್ ವ್ಯವಸ್ಥೆಯನ್ನು ನಿಯಮಾನುಸಾರ ಸಮಾರಂಭಕ್ಕೆ ಮುಂಚೆ ಮಾಡಬೇಕಾಗಿದ್ದರೂ ಭದ್ರತಾ ವ್ಯವಸ್ಥೆಯನ್ನು ಸರಿಯಾಗಿ ಮಾಡದೇ, ಇದ್ದುದರಿಂದ ಮತ್ತು ಸೂಕ್ತ ತಪಾಸಣೆಯನ್ನು ನಡೆಸದ ಕಾರಣ ಟೆನಜಿನ್ ಸನ್‌ಡ್ಯೂ

ಎಂಬ ವ್ಯಕ್ತಿಯು ಟಿಬೇಟ್‌ನ ಧ್ವಜವನ್ನು ಎತ್ತಿಹಿಡಿದು ಮುಖ್ಯ ಕಟ್ಟಡದ ಮೇಲೆ ಬೀಸುತ್ತಾ ಘೋಷಣೆಯನ್ನು ಕೂಗಿ ದುರ್ನಡತೆ ತೋರಿಸಲು ಕಾರಣರಾಗಿರುತ್ತಾರೆ. ಮೇಲ್ವಿಚಾರಕರಾದ ನೀವು ಅಗತ್ಯ ಬಂದೋಬಸ್ತ್ ವ್ಯವಸ್ಥೆಯನ್ನು ಮಾಡುವಂತೆ ಸದರಿ ಪಿ.ಐ., ರವರಿಗೆ ಸೂಚನೆ ಹಾಗೂ ಮಾರ್ಗದರ್ಶನ ನೀಡದೇ ಮತ್ತು ಮಾಡಲ್ಪಟ್ಟ ಭದ್ರತೆಯನ್ನು ಪರಿಶೀಲಿಸದೇ ಹಾಗೂ ಮುನ್ನೆಚ್ಚರಿಕೆ ಕ್ರಮ ವಹಿಸದೇ ನಿಷ್ಕಳಾಜಿತನ ತೋರಿ ನಿಮ್ಮ ಕರ್ತವ್ಯದಲ್ಲಿ ಅತೀವ ನಿರ್ಲಕ್ಷತೆ ಮತ್ತು ಬೇಜಾವಾಬ್ದಾರಿತನ ತೋರಿಸಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ:05-05-2005ರ ಆದೇಶದಲ್ಲಿ ಅರ್ಜಿದಾರರ ಮುಂದಿನ ಒಂದು ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗೆ ಧಕ್ಕೆ ಆಗದಂತೆ ಒಂದು ವರ್ಷ ಕಾಲ ಮುಂದೂಡಿದ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ದಾಖಲೆಗಳನ್ನೂ ಪರಿಶೀಲಿಸಲಾಗಿದೆ. ಅತೀ ಗಣ್ಯ ವ್ಯಕ್ತಿಗಳ ಭೇಟಿ ಸಂದರ್ಭದಲ್ಲಿ ಗುಪ್ತದಳ ವಿಭಾಗಕ್ಕೆ ಟಿಬೆಟ್ ಯೂತ್ ಕಾಂಗ್ರೇಸ್ ರವರು ಚೀನಾ ದೇಶದ ಪ್ರಧಾನಿ ಬಂದಾಗ ಉಪವಾಸ ಸತ್ಯಾಗ್ರಹ ನಡೆಸಲು ಅನುಮತಿ ಕೋರಿದ್ದು, ಡಿಸಿಪಿ., ಕೇಂದ್ರ ವಿಭಾಗ, ಬೆಂಗಳೂರು ಇವರು ದಿನಾಂಕ:07-04-2005ರಂದು ತಿರಸ್ಕರಿಸಿ ಹಿಂಬರಹ ನೀಡಿರುತ್ತಾರೆ. ಈ ಮಾಹಿತಿಯನ್ನು ಭದ್ರತೆ ಕಾಪಾಡುವ ಸಂಬಂಧಿತ ಪೊಲೀಸ್ ಠಾಣೆಗಾಗಲಿ, ಅಧಿಕಾರಿಗಳಿಗಾಗಲಿ ಮುನ್ನೆಚ್ಚರಿಕೆಯಾಗಿ ಮಾಹಿತಿ ನೀಡಿರುವುದಿಲ್ಲ.

ಅರ್ಜಿದಾರರು ತಮ್ಮ ಕರ್ತವ್ಯ ಲೋಪವಿಲ್ಲದೆ, ಸಭೆ ನಡೆಸಿ, ಯಾರ್ಯಾರು ಯಾವ ಯಾವ ಕರ್ತವ್ಯಗಳನ್ನು ನಿರ್ವಹಿಸಬೇಕೆಂದು ಸೂಕ್ತ ಮುನ್ನೆಚ್ಚರಿಕೆಗಳನ್ನು ನೀಡಿರುವುದು ಕಂಡುಬರುತ್ತದೆ. ಅರ್ಜಿದಾರರು 29 ವರ್ಷ ಪೊಲೀಸ್ ಇಲಾಖೆಯಲ್ಲಿ ಸೇವೆ ಸಲ್ಲಿಸಿದ್ದು, ಪ್ರಮಾಣಿಕತೆ, ನಿಷ್ಟತೆಗೆ ಹೆಸರಾಗಿ, ಇವರ ಅಸಾಧಾರಣ ಸೇವೆಯನ್ನು ಗುರುತಿಸಿ, ರಾಜ್ಯ ಹಾಗೂ ಕೇಂದ್ರ ಸರ್ಕಾರಗಳು ಮುಖ್ಯ ಮಂತ್ರಿಗಳ ಚಿನ್ನದ ಪದಕ ಹಾಗೂ ರಾಷ್ಟ್ರಪತಿಗಳ ಪದಕವನ್ನು ಪಡೆದಿದ್ದು, ಅನೇಕ ಪ್ರಶಂಸಾ ಪತ್ರಗಳನ್ನು, ನಗದು ಬಹುಮಾನಗಳನ್ನು ಪಡೆದಿರುತ್ತಾರೆ.

ಈ ಹಿನ್ನೆಲೆಯಲ್ಲಿ, ಒಬ್ಬ ಮಹಿಳಾ ಅಧಿಕಾರಿಯಾಗಿ, ಇವರು ನಿರ್ವಹಿಸಿರುವ ಕಾರ್ಯಗಳನ್ನು ಪರಿಶೀಲಿಸಿದ ನಂತರ, ಚೀನಾದ ಪ್ರಧಾನ ಮಂತ್ರಿಯವರು ಬೆಂಗಳೂರಿನ ಭಾರತೀಯ ವಿಜ್ಞಾನ ಸಂಸ್ಥೆಗೆ ಭೇಟಿ ನೀಡಿದಾಗ, ಜರುಗಿದ ಭದ್ರತಾ ಲೋಪವು ಒಂದು ದುರದೃಷ್ಟಕರ ಸಂಗತಿಯಾಗಿದ್ದರೂ, ಇದು ಒಬ್ಬ ಅಧಿಕಾರಿಯ ನಿಷ್ಕಾಳಜಿತನ ಮಾತ್ರ ಆಗಿರದೆ, ವಿ.ವಿ.ಐ.ಪಿ., ಕರ್ತವ್ಯಕ್ಕೆ ನಿಯೋಜಿಸಲಾಗಿದ್ದ, ಅನೇಕ ಅಧಿಕಾರಿಗಳ ಸಾಮೂಹಿಕ ಕರ್ತವ್ಯ ವೈಫಲ್ಯತೆ ಆಗಿರುತ್ತದೆ. ಆದ್ದರಿಂದ, ಶಿಸ್ತು ಪ್ರಾಧಿಕಾರಿಯ ದಿನಾಂಕ:05-05-2005ರ ದಂಡನಾದೇಶವನ್ನು ರದ್ದುಪಡಿಸಿ, ಅರ್ಜಿದಾರರ ಮೇಲ್ಮನವಿಯನ್ನು ಪುರಸ್ಕರಿಸಿ, ಇವರ ವಾರ್ಷಿಕ ವೇತನ ಬಡ್ತಿಗಳನ್ನು ಬಿಡುಗಡೆಗೊಳಿಸಿ, ಸಕ್ರಮಗೊಳಿಸಲು ಉದ್ದೇಶಿಸಿ, ಕರ್ನಾಟಕ ಲೋಕ ಸೇವಾ ಆಯೋಗದ ಅಭಿಪ್ರಾಯ ಕೋರಲಾಗಿತ್ತು. ಕರ್ನಾಟಕ ಲೋಕಸೇವಾ ಆಯೋಗವು ದಿನಾಂಕ: 09-05-2006ರ ತನ್ನ ಪತ್ರದಲ್ಲಿ ಸರ್ಕಾರದ ಪ್ರಸ್ತಾವನೆಗೆ ತನ್ನ ಸಹಮತಿ ನೀಡಿದೆ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶವನ್ನು ಮಾರ್ಪಡಿಸಲು ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 336 ಪೊಸಿಅ 2005 ಬೆಂಗಳೂರು, ದಿನಾಂಕ:17ನೇ ಜೂನ್ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ದಿನಾಂಕ:05-05-2005ರ ಶಿಸ್ತು ಪ್ರಾಧಿಕಾರಿ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ಇವರ ದಂಡನಾದೇಶವನ್ನು ರದ್ದುಪಡಿಸಿ, ಶ್ರೀಮತಿ ಎನ್.ಎಸ್.ಇಂದಿರಾ, ಎಸಿಪಿ, ಶೇಷಾದ್ರಿಪುರಂ, ಉಪ ವಿಭಾಗ, ಬೆಂಗಳೂರು ಇವರು ಸರ್ಕಾರಕ್ಕೆ ಸಲ್ಲಿಸಿದ್ದ ದಿನಾಂಕ: 03-08-2005ರ ಮೇಲ್ಮನವಿ ಅರ್ಜಿಯನ್ನು ಪುರಸ್ಕರಿಸಿ, ವಾರ್ಷಿಕ ವೇತನ ಬಡ್ತಿಗಳನ್ನು ಬಿಡುಗಡೆ ಮಾಡಿ ಸಕ್ರಮಗೊಳಿಸಿದೆ.

ಈ ಆದೇಶವನ್ನು ಕರ್ನಾಟಕ ಲೋಕ ಸೇವಾ ಆಯೋಗದ ದಿನಾಂಕ:09-05-2006ರ ಪತ್ರದಲ್ಲಿನ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 984

**ಸಿ.ಬಸವರಾಜು**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು).

**ವಿಷಯ:** ಶ್ರೀ ಆರ್.ಎಸ್. ಜಗದೀಶ್, ಹೆಚ್‌ಸಿ-32, ಬೆಸ್ಕಾಂ, ಪೊಲೀಸ್ ಠಾಣೆ, ಕೆಪಿಟಿಸಿಎಲ್, ಚಿಕ್ಕಬಳ್ಳಾಪುರ ಹಿಂದೆ ಕೋಲಾರ (ಗ್ರಾ) ಠಾಣೆ, ಶ್ರೀ ಆರ್.ಎ.ಸೇರನ್, ಹೆಚ್‌ಸಿ-20, ಶ್ರೀನಿವಾಸಪುರ ಪೊಲೀಸ್ ಠಾಣೆ, ಈ ಹಿಂದೆ ಪಿಸಿ-532, ಮತ್ತು ಶ್ರೀ ತಿಪ್ಪಣ್ಣ, ಪಿಸಿ-308, ಕೋಲಾರ (ಗ್ರಾ) ಠಾಣೆ ರವರುಗಳು ಸರ್ಕಾರಕ್ಕೆ ಸಲ್ಲಿಸಿರುವ ಮೇಲ್ಮನವಿ ಅರ್ಜಿಯ ಬಗ್ಗೆ.

**ಓದಲಾಗಿದೆ:** 1) ಶಿಸ್ತು ಪ್ರಾಧಿಕಾರಿ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ಇವರ ಆದೇಶ ಸಂಖ್ಯೆ:ಸಿಬಿ/8/41/2003-04, ದಿನಾಂಕ:25-02-2005.

2) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:13-06-2005 06-06-2005, ಮತ್ತು 11-07-2005.

3) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ದಿನಾಂಕ:

ಪ್ರಸ್ತಾವನೆ:-

ಶ್ರೀ ಆರ್.ಎಸ್.ಜಗದೀಶ್, ಹೆಚ್‌ಸಿ-32, ಶ್ರೀ ಆರ್.ಎ.ಸೇರನ್, ಹೆಚ್‌ಸಿ-20, ಮತ್ತು ಶ್ರೀ ತಿಪ್ಪಣ್ಣ, ಪಿಸಿ-308, ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965ರ ನಿಯಮ 6 ಮತ್ತು 8ರಡಿ ಜಂಟಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**1.ದೋಷರೋಪಣೆ:**

1. **ಶ್ರೀ ಆರ್.ಎಸ್.ಜಗದೀಶ್**: ಹೆಚ್‌ಸಿ-32 "ನೀವು ಶ್ರೀ ಸಂಪತ್‌ಕುಮಾರ್ ಪಿಐ ಈ ಹಿಂದೆ ಪಿಎಸ್‌ಐ ಕೋಲಾರ ಗ್ರಾಮಾಂತರ ಪೊಲೀಸ್ ಠಾಣೆ, ಇವರಿಗೆ ದಿನಾಂಕ:27-02-2003 ಮತ್ತು 19-04-2003ರಂದು ನ್ಯಾಯಾಲಯದ ವಾರೆಂಟನ್ನು ಎಗ್ಸಿಕ್ಯೂಟ್ ಮಾಡದೇ, ನಿಸ್ತಂತು ನೀಡಿ, ಅವರನ್ನು ಖುದ್ದಾಗಿ ಭೇಟಿ ಮಾಡಿ, ವಾರೆಂಟನ್ನು ಜಾರಿ ಮಾಡದೇ, ಕರ್ತವ್ಯದಲ್ಲಿ ಉದಾಸೀನತೆ ಮತ್ತು ಬೇಜವಾಬ್ದಾರಿತನವನ್ನು ತೋರಿಸಿರುತ್ತೀರಿ."
2. **ಶ್ರೀ ಆರ್.ಎ.ಸೇರನ್**: (ಹಿಂದೆ ಪಿಸಿ-532) "ನೀವು ಶ್ರೀ ಸಂಪತ್‌ಕುಮಾರ್ ರವರಿಗೆ ದಿನಾಂಕ:27-02-2003 ಮತ್ತು 19-04-2003ರಂದು ನ್ಯಾಯಾಲಯದ ವಾರೆಂಟನ್ನು ಎಗ್ಸಿಕ್ಯೂಟ್ ಮಾಡದೇ, ನಿಸ್ತಂತು ನೀಡಿ, ಅವರನ್ನು ಖುದ್ದಾಗಿ ಭೇಟಿ ಮಾಡಿ ವಾರೆಂಟನ್ನು ಜಾರಿ ಮಾಡದೇ, ಕರ್ತವ್ಯದಲ್ಲಿ ಉದಾಸೀನತೆ ಮತ್ತು ಬೇಜವಾಬ್ದಾರಿತನವನ್ನು ತೋರಿಸಿರುತ್ತೀರಿ."
3. **ಶ್ರೀ ತಿಪ್ಪಣ್ಣ**, (ಪಿಸಿ-308) "ನಿಮಗೆ ನಿರ್ವಹಿಸಿದ ಕರ್ತವ್ಯ ಸರಿಯಾದ ರೀತಿಯಲ್ಲಿ ಮಾಡಲು ಪಿಎಸ್‌ಐ ರವರು ಹೇಳಿದ್ದು, ಅದರಂತೆ ಷರಾವನ್ನು ಬರೆದುಕೊಟ್ಟಿರುವುದಾಗಿ, ಶ್ರೀ ಸಂಪತ್‌ಕುಮಾರ್ ರವರು ಎಲ್ಲಿರುವರೆಂಬ ಬಗ್ಗೆ ತಿಳಿದುಕೊಳ್ಳದೆ ಮತ್ತು ಅವರಿಗೆ ವಾರೆಂಟ್ ಎಗ್ಸಿಕ್ಯೂಟ್ ಮಾಡದೇ ನೀವು ಕರ್ತವ್ಯದಲ್ಲಿ ಅತೀವ ಉದಾಸೀನತೆ ಮತ್ತು ಕರ್ತವ್ಯದಲ್ಲಿ ಲೋಪ ವೆಸಗಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ:25-02-2005ರ ಆದೇಶದಲ್ಲಿ ಅರ್ಜಿದಾರರ ಒಂದು ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗಳಿಗೆ ಧಕ್ಕೆ ಆಗುವಂತೆ ಮುಂದೂಡಿದ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಅರ್ಜಿದಾರರುಗಳು ಸರ್ಕಾರಕ್ಕೆ ಮೇಲ್ಮನವಿ ಅರ್ಜಿಗಳನ್ನು ಸಲ್ಲಿಸಿರುತ್ತಾರೆ. ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರುಗಳು ಎಸಗಿರುವ ಆರೋಪಗಳು ಇಲಾಖಾ ವಿಚಾರಣೆಯಲ್ಲಿ ಸಾಬೀತಾಗಿರುತ್ತದೆ. ಅಲ್ಲದೆ, ಇವರುಗಳು ಆರೋಪಿತ ಪೊಲೀಸ್ ಅಧಿಕಾರಿಗೆ ವಾರೆಂಟನ್ನು ಖುದ್ದಾಗಿ ಭೇಟಿ ಮಾಡಿ ಜಾರಿ ಮಾಡದೇ, ತಮ್ಮ ಕರ್ತವ್ಯದಲ್ಲಿ ಗುರುತರವಾದ ಲೋಪ ಎಸಗಿರುವುದು, ಇವರುಗಳ ದುರ್ನಡತೆಗೆ ಸಾಕ್ಷಿ ಆಗಿರುತ್ತದೆ. ಅರ್ಜಿದಾರರುಗಳು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿ ಶಿಸ್ತು ಪ್ರಾಧಿಕಾರಿಯ ಲಘು ದಂಡನೆ ವಿಧಿಸಿರುತ್ತಾರೆ. ಆದರೆ, ಈ ದಂಡನೆಯು KCSR ನ ನಿಯಮ 59 (1) (ಎ) (II)ರಲ್ಲಿ ತಿಳಿಸಿರುವಂತೆ ಅವಧಿ ನಿಗದಿಪಡಿಸದೆ ಹೊರಡಿಸಿರುವ ಕಾರಣ, ಶಿಸ್ತು ಪ್ರಾಧಿಕಾರಿಯ ದಂಡನಾ ಆದೇಶವನ್ನು ಭಾಗಶ: ಮಾರ್ಪಡಿಸಿ, ಅವಧಿ ನಿಗಧಿ ಪಡಿಸಲು ಸರ್ಕಾರವು ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 13 ಪೊಸಿಅ 2006 ಬೆಂಗಳೂರು, ದಿನಾಂಕ:21ನೇ ಜೂನ್ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ದಿನಾಂಕ:25-02-2005ರ ಶಿಸ್ತು ಪ್ರಾಧಿಕಾರಿ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ಇವರ ದಂಡನಾದೇಶವನ್ನು ಭಾಗಶ: ಮಾರ್ಪಡಿಸಿ, ಶ್ರೀ ಆರ್.ಎಸ್.ಜಗದೀಶ್, ಹೆಚ್‌ಸಿ-32, ಶ್ರೀ ಆರ್.ಎ.ಸೇರನ್, ಹೆಚ್‌ಸಿ-20 ಮತ್ತು ಶ್ರೀ ತಿಪ್ಪಣ್ಣ, ಪಿಸಿ-308, ಇವರುಗಳ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗಳಿಗೆ ಧಕ್ಕೆ ಆಗುವಂತೆ ಒಂದು ವರ್ಷದ ಅವಧಿಗೆ ಮುಂದೂಡಲಾಗಿದೆ. ಈ ಆದೇಶವು ಶಿಸ್ತು ಪ್ರಾಧಿಕಾರಿ ಹೊರಡಿಸಿದ ಆದೇಶ ದಿನಾಂಕದಿಂದಲೇ ಜಾರಿಗೆ ಬರುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 986

**ಸಿ.ಬಸವರಾಜು**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು).

**ವಿಷಯ:** ಶ್ರೀ ಡಿ.ರಂಗನಾಥ, ಪೊಲೀಸ್ ಇನ್ಸ್‌ಪೆಕ್ಟರ್, ಜ್ಞಾನಭಾರತಿ ಪೊಲೀಸ್ ಠಾಣೆ, ಬೆಂಗಳೂರು ನಗರ ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿಯ ಬಗ್ಗೆ.

**ಓದಲಾಗಿದೆ:** 1) ಶಿಸ್ತು ಪ್ರಾಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಪೊಲೀಸ್, ಸಂಚಾರ ಪಶ್ಚಿಮ ವಿಭಾಗ, ಬೆಂಗಳೂರು ನಗರ ಇವರ ಆದೇಶ ಸಂಖ್ಯೆ:ಡಿಇ/11/ಸಂಪ/2000, ದಿನಾಂಕ: 14-12-2000.

2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಅಡಿಷನಲ್ ಪೊಲೀಸ್, ಕಮೀಷನರ್, ಆಡಳಿತ ಮತ್ತು ಸಿಎಆರ್, ಬೆಂಗಳೂರು ನಗರ ಇವರ ಆದೇಶ ಸಂಖ್ಯೆ:57/ಅಪೀಲು/2000-01, ದಿನಾಂಕ: 15-03-2002.

3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:07-12-2004

4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಸಿಬಿ/8/3/2005-2006 ದಿನಾಂಕ:23-06-2005.

**ಪ್ರಸ್ತಾವನೆ:-**

ಶ್ರೀ ಡಿ.ರಂಗನಾಥ್, ಪಿಐ, ಜ್ಞಾನಭಾರತಿ ಪೊಲೀಸ್ ಠಾಣೆ, ಬೆಂಗಳೂರು ನಗರ ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965ರ ನಿಯಮ 7ರಡಿ ದೋಷರೋಪಣಾ ಪತ್ರ ಹೊರಡಿಸಲಾಗಿದೆ.

**1.ದೋಷರೋಪಣೆ:**

"ಶ್ರೀ ಡಿ.ರಂಗನಾಥ್, ಪಿಐ, ಪೀಣ್ಯ ಸಂಚಾರಿ ವಲಯ, ಬೆಂಗಳೂರು ನಗರದವರಾದ ನೀವು ದಿನಾಂಕ: 06-11-2000ರಂದು ಮಾನ್ಯ ಪೊಲೀಸ್ ಆಯುಕ್ತರವರ ಕಚೇರಿಯಲ್ಲಿ ಹಿರಿಯ ಅಧಿಕಾರಿಗಳು ನಡೆಸಿದ ಸಂಚಾರ ಅಪರಾಧಗಳ ಪರಿಶೀಲನಾ ಸಭೆಯಲ್ಲಿ, ನೀವು ನಿಮ್ಮ ಸಂಚಾರ ವಲಯದ ವ್ಯಾಪ್ತಿಯಲ್ಲಿ ಕಳೆದ ಸಾಲಿನಲ್ಲಿ ಸಂಭವಿಸಿ, ವರದಿ ಆಗಿರುವ ರಸ್ತೆ ಅಪಘಾತಗಳಲ್ಲಿ, ಮಾರಣಾಂತಿಕ ಅಪಘಾತಗಳಲ್ಲಿ ಹೆಚ್ಚಳವಾಗಿರುವ ಬಗ್ಗೆ ತಡೆಗಟ್ಟಲು ಕೈಗೊಂಡಿರುವ ಮುಂಜಾಗ್ರತಾ ಕ್ರಮಗಳ ಬಗ್ಗೆ ವಿವರಗಳನ್ನು ನೀಡಲು ಸೂಚಿಸಿದಾಗ, ಸರಿಯಾದ ಮತ್ತು ಸೂಕ್ತವಾದ ರೀತಿಯಲ್ಲಿ ಉತ್ತರಿಸುವಲ್ಲಿ ವಿಫಲರಾಗಿರುತ್ತೀರಿ. ಪ್ರತಿಯೊಬ್ಬ ವಲಯಾಧಿಕಾರಿಯೂ ಸಹ ತಮ್ಮ ತಮ್ಮ ಸರಹದ್ದುಗಳಲ್ಲಿ ಸಂಭವಿಸುವ ಮಾರಣಾಂತಿಕ ರಸ್ತೆ ಅಪಘಾತಗಳನ್ನು ತಡೆಗಟ್ಟಲು ಕೈಗೊಂಡಿರುವ ಮುಂಜಾಗ್ರತಾ ಸುಧಾರಣಾ ಕ್ರಮಗಳ ಬಗ್ಗೆ ವಿವರಗಳನ್ನು ಹಿರಿಯ ಅಧಿಕಾರಿಗಳಿಗೆ ಸರಿಯಾದ ರೀತಿಯಲ್ಲಿ ನೀಡುವಂತೆ ಈ ಹಿಂದೆ ಒಮ್ಮೆಲೆ ಎಲ್ಲಾ ಸಿಪಿಐ ರವರುಗಳಿಗೆ ಸಹ ತಿಳುವಳಿಕೆ- ಗಳನ್ನು ಹಿರಿಯ ಅಧಿಕಾರಿಗಳು ಸೂಚಿಸಿರುತ್ತಾರೆ. ಆದರೂ ಸಹ ಈ ವಿಚಾರದಲ್ಲಿ ನೀವು ಸರಿಯಾದ ಗಮನವನ್ನು ಹರಿಸದೇ ಇರುವುದು ನೀವು ಉತ್ತರಿಸಿದ ರೀತಿಯಲ್ಲಿ ದೃಢಪಟ್ಟಿರುತ್ತದೆ. ಆದ್ದರಿಂದ ನೀವು ನಿಮ್ಮ ಕರ್ತವ್ಯದಲ್ಲಿ ನಿರ್ಲಕ್ಷತೆಯನ್ನು ತೋರಿಸಿರುವುದು ಕಂಡು ಬರುತ್ತದೆ."

ಮೇಲ್ಕಂಡ ಆರೋಪದ ಮೇಲೆ ದೋಷಾರೋಪಣಾ ಪತ್ರ ಹೊರಡಿಸಿ, ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಉಪ ಪೊಲೀಸ್ ಕಮೀಷನರ್, ಪಶ್ಚಿಮ ವಿಭಾಗ, ಬೆಂಗಳೂರು ನಗರ, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ:14-12-2000ರ ಆದೇಶದಲ್ಲಿ ಅರ್ಜಿದಾರರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಅವರ ಮುಂದಿನ ವಾರ್ಷಿಕ ವೇತನ ಬಡ್ತಿಗೆ ಧಕ್ಕೆ ಆಗದಂತೆ ಒಂದು ವರ್ಷ ಕಾಲ ಮುಂದೂಡಿದ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಅಡಿಷನಲ್ ಪೊಲೀಸ್ ಕಮೀಷನರ್ ಆಡಳಿತ ಮತ್ತು ಸಿಎಆರ್, ಬೆಂಗಳೂರು ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ:15-03-2002ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ದೋಷಾರೋಪಣಾ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಹಿರಿಯ ಅಧಿಕಾರಿಗಳು ಮಾರ್ಗದರ್ಶನ/ಸೂಚನೆ/ಆದೇಶಗಳನ್ನು ನೀಡುವ ಸಂಬಂಧ ನಡೆಯುವ ಸಭೆಗಳಲ್ಲಿ ಅಗತ್ಯ, ಕನಿಷ್ಟ ಮಟ್ಟದ ದಾಖಲೆ/ಮಾಹಿತಿಗಳನ್ನು ಸಿದ್ಧಪಡಿಸಿಕೊಂಡು ಹಾಜರಾಗಬೇಕಾಗಿದ್ದು, ಆಯಾ ಪೊಲೀಸ್ ಠಾಣಾ ಅಧಿಕಾರಿಯ ಕರ್ತವ್ಯವಾಗಿರುತ್ತದೆ. ಅದರಲ್ಲೂ ಸಂಚಾರ ವಿಭಾಗದ ಪೊಲೀಸ್ ಅಧಿಕಾರಿಗಳ ಕರ್ತವ್ಯ ಪ್ರಜ್ಞೆ, ಜಾಗೃತಿ ಇನ್ನು ಹೆಚ್ಚಿನದಾಗಿದ್ದು, ಸಂಚಾರ ವಿಭಾಗದ ಅಪಘಾತಕ್ಕೆ ಸಂಬಂಧಿಸಿದ ಮಾಹಿತಿ/ದಾಖಲೆಗಳನ್ನು ಒದಗಿಸಬೇಕಾಗಿದ್ದು ಸಮಂಜಸ ಮಾಹಿತಿ/ದಾಖಲೆ ಒದಗಿಸದ ಕಾರಣ ಶಿಸ್ತು ಪ್ರಾಧಿಕಾರಿ ದಂಡನೆ ವಿಧಿಸಿರುತ್ತಾರೆ. ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನಾ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 4 ಪೊಸಿಅ 2006 ಬೆಂಗಳೂರು, ದಿನಾಂಕ:07ನೇ ಜೂನ್ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಡಿ.ರಂಗನಾಥ್, ಪೊಲೀಸ್ ಇನ್ಸ್‌ಪೆಕ್ಟರ್, ಜ್ಞಾನಭಾರತಿ ಪೊಲೀಸ್ ಠಾಣೆ, ಬೆಂಗಳೂರು ನಗರ ಇವರು ಸರ್ಕಾರಕ್ಕೆ ಸಲ್ಲಿಸಿದ್ದ ದಿನಾಂಕ: 07-12-2004ರ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 947

**ಸಿ.ಬಸವರಾಜು**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು).

**ವಿಷಯ:** ಶ್ರೀ ಜಿ.ಕೆ.ಮೇಲಿನಮನಿ, ಮಾಜಿ ಎಪಿಸಿ-220 ಡಿಎಆರ್ ಬಾಗಲಕೋಟೆ ಇವರ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:**

1) ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಬಾಗಲಕೋಟೆ, ಇವರ ಆದೇಶ ಸಂಖ್ಯೆ:ಸಿಬ್ಬಂದಿ-3/ಡಿಇ-8/2003, ದಿನಾಂಕ:16-07-2004.

2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಉತ್ತರ ವಲಯ, ಬೆಳಗಾವಿ, ಇವರ ಆದೇಶ ಸಂಖ್ಯೆ:ಅಪೀಲು/25/ಉವ/2004, ದಿನಾಂಕ:07-04-2005.

3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:05-10-2005.

4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು/2/84/2005, ದಿನಾಂಕ:14-11-2005.

5) ಕರ್ನಾಟಕ ಲೋಕ ಸೇವಾ ಆಯೋಗದ ಪತ್ರ ಸಂಖ್ಯೆ:ಪಿಎಸ್‌ಸಿ 27 / CNS / 06, ದಿನಾಂಕ:22-05-2006.

**ಪ್ರಸ್ತಾವನೆ:-**

ಶ್ರೀ ಜಿ.ಕೆ.ಮೇಲಿನಮನಿ, ಮಾಜಿ ಎಪಿಸಿ-220 ಡಿಎಆರ್, ಬಾಗಲಕೋಟೆ ಜಿಲ್ಲೆ, ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965ರ ನಿಯಮ 6ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:**

"ಆಪಾದಿತರಾದ ಶ್ರೀ ಜಿ.ಕೆ.ಮೇಲಿನಮನಿ, ಎಪಿಸಿ-220, ಡಿಎಆರ್ ಬಾಗಲಕೋಟೆ ನೀವು ದಿನಾಂಕ: 10-08-2003 ರಿಂದ 30-08-2003 ರವರೆಗೆ ಅನಧಿಕೃತವಾಗಿ ಗೈರು ಹಾಜರ ಉಳಿದಿರುತ್ತೀರಿ. ಅಲ್ಲದೇ, ನೀವು ಪದೇ ಪದೇ ಇದೇ ರೀತಿ ಅನಧಿಕೃತವಾಗಿ ಗೈರು ಹಾಜರ ಉಳಿಯುವ ಸ್ವಾಭಾವ ಬೆಳೆಸಿಕೊಂಡು ಬಂದಿರುತ್ತೀರಿ. ಈ ರೀತಿ ನೀವು ನಿಮ್ಮ ನ್ಯಾಯ ಸಮ್ಮತವಾದ ಕರ್ತವ್ಯದಲ್ಲಿ ಘೋರ ದುರ್ನಡತೆ, ಅಶಿಸ್ತು, ನಿಷ್ಕಾಳಜಿತನ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಬಾಗಲಕೋಟೆ, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ:16-07-2004ರ ಆದೇಶದಲ್ಲಿ ಅರ್ಜಿದಾರರನ್ನು ಸೇವೆಯಿಂದ ವಜಾ ಮಾಡಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್ ಉತ್ತರ ವಲಯ, ಬೆಳಗಾವಿ, ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ:07-04-2005ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರ ದಿನಾಂಕ:10-08-2003 ರಿಂದ 30-08-2003 ರವರೆಗಿನ ಕೇವಲ ಇಪ್ಪತ್ತು ದಿನಗಳ ಅನಧಿಕೃತ ಗೈರುಹಾಜರಿಗೆ ಸೇವೆಯಿಂದ ವಜಾ ಮಾಡಿರುವ ದಂಡನೆ ಅತೀ ಹೆಚ್ಚಿನದಾಗಿರುತ್ತದೆ. ಅರ್ಜಿದಾರರು 1999ರಲ್ಲಿ ಕರ್ತವ್ಯಕ್ಕೆ ಸೇರಿದ್ದು, ಬೇರೆ ಯಾವುದೇ ರೀತಿಯ ಗುರುತರ ಆರೋಪಗಳಿಲ್ಲದಿದ್ದರೂ, 20 ದಿನಗಳ ಗೈರುಹಾಜರಿಗೆ ಸೇವೆಯಿಂದ ವಜಾ ಮಾಡಿರುವ ದಂಡನೆ ಅತೀ ಹೆಚ್ಚಿನದೆಂದು ಹಾಗೂ ಸುತ್ತೋಲೆ ದಿನಾಂಕ:14-09-2001ರ ಉಲ್ಲಂಘನೆಯಾಗಿದೆ ಎಂದು ಪರಿಗಣಿಸಿ, ಅರ್ಜಿದಾರರನ್ನು ಸೇವೆಯಲ್ಲಿ ಪುನರ್ ನೇಮಿಸಿ, ಎರಡು ವಾರ್ಷಿಕ ವೇತನ ಬಡ್ತಿಗಳನ್ನು ಸಂಚಿತ ಪರಿಣಾಮ ಬೀರುವಂತೆ ತಡೆಹಿಡಿಯುವ ಹಾಗೂ ಗೈರು ಹಾಜರಿ ಅವಧಿಯನ್ನು `ವೇತನ ರಹಿತ ರಜೆ` ಎಂದೂ, ಸೇವೆಗೆ ಪುನರ್ ನೇಮಕಗೊಳ್ಳುವ ವರೆಗಿನ ಅವಧಿಯನ್ನು ಸೇವೆಯಿಂದ ಹೊರಗುಳಿದ ಅವಧಿಯೆಂದೇ ಪರಿಗಣಿಸಲು ಉದ್ದೇಶಿಸಿ, ಕರ್ನಾಟಕ ಲೋಕ ಸೇವಾ ಆಯೋಗದ ಅನುಮೋದನೆ ಕೋರಲಾಗಿತ್ತು. ಕರ್ನಾಟಕ ಲೋಕ ಸೇವಾ ಆಯೋಗವು ದಿನಾಂಕ: 22-05-2006ರ ತನ್ನ ಪತ್ರದಲ್ಲಿ ಸರ್ಕಾರದ ಪ್ರಸ್ತಾವನೆಗೆ ಸಹಮತಿ ನೀಡಿರುತ್ತದೆ. ಅದರಂತೆ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 203 ಪೊಸಿಅ 2005 ಬೆಂಗಳೂರು, ದಿನಾಂಕ:09ನೇ ಜೂನ್ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ದಿನಾಂಕ:16-07-2004ರ ಶಿಸ್ತು ಪ್ರಾಧಿಕಾರಿ ಆದೇಶವನ್ನು ರದ್ದುಪಡಿಸಿ, ಶ್ರೀ ಜಿ.ಕೆ.ಮೇಲಿನಮನಿ, ಮಾಜಿ ಎಪಿಸಿ-220 ಡಿಎಆರ್ ಬಾಗಲಕೋಟೆ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ದಿನಾಂಕ:05-10-2005ರ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಪುರಸ್ಕರಿಸಿ, ಈ ಕೆಳಕಂಡಂತೆ ಆದೇಶಿಸಿದೆ.

1) ಅರ್ಜಿದಾರರನ್ನು ಸೇವೆಯಲ್ಲಿ ಪುನರ್ ನೇಮಕ ಮಾಡಿದೆ.
2) ಅರ್ಜಿದಾರರು ಅನಧಿಕೃತವಾಗಿ ಕರ್ತವ್ಯಕ್ಕೆ ಗೈರು ಹಾಜರಿ ಆಗಿರುವುದಕ್ಕೆ ಅವರ ಎರಡು ವಾರ್ಷಿಕ ವೇತನ ಬಡ್ತಿಗಳನ್ನು ಸಂಚಿತ ಪರಿಣಾಮ ಬೀರುವಂತೆ ತಡೆ ಹಿಡಿಯುವ ಶಿಕ್ಷೆಯನ್ನು ವಿಧಿಸಲಾಗಿದೆ.
3) ಅರ್ಜಿದಾರರು ಕರ್ತವ್ಯಕ್ಕೆ ಗೈರು ಹಾಜರಾದ ಅವಧಿಯನ್ನು `ವೇತನ ರಹಿತ ರಜೆ` ಎಂದು ಪರಿಗಣಿಸಿದೆ.
4) ಶಿಸ್ತು ಪ್ರಾಧಿಕಾರಿ ಅರ್ಜಿದಾರರನ್ನು ಸೇವೆಯಿಂದ ವಜಾ ಮಾಡಿದ ದಿನಾಂಕದಿಂದ ಸೇವೆಗೆ ಪುನರ್ ನೇಮಕಗೊಂಡು ಹಾಜರಾಗುವ ದಿನಾಂಕದವರೆಗಿನ ಅವಧಿಯನ್ನು `ಕರ್ತವ್ಯದಿಂದ ಹೊರಗುಳಿದ ಅವಧಿ` ಎಂದೇ ಪರಿಗಣಿಸಿದೆ.

ಈ ಆದೇಶವನ್ನು ಕರ್ನಾಟಕ ಲೋಕ ಸೇವಾ ಆಯೋಗದ ದಿನಾಂಕ:22-05-2006ರ ಪತ್ರದಲ್ಲಿನ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 946

**ಸಿ.ಬಸವರಾಜು**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು).

**ವಿಷಯ:** ಶ್ರೀ ಹೆಚ್.ವಿ.ಶಿವಣ್ಣ, ಹೆಚ್‌ಸಿ-2419, ಪೊಲೀಸ್ ಕಂಟ್ರೋಲ್ ರೂಂ, ಬೆಂಗಳೂರು ರವರು ಸರ್ಕಾರಕ್ಕೆ ಸಲ್ಲಿಸಿದ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ:ಒಇ 106 ಪೊಸಿಅ 94, ದಿನಾಂಕ:30-11-1994.

2) ಕರ್ನಾಟಕ ಆಡಳಿತ ನ್ಯಾಯ ಮಂಡಳಿಯ ಆದೇಶ ಸಂಖ್ಯೆ: 1504/1996, ದಿನಾಂಕ: 20-03-1998.

3) ಕರ್ನಾಟಕ ರಾಜ್ಯ ಉಚ್ಛ ನ್ಯಾಯಾಲಯದ ರಿಟ್ ಅರ್ಜಿ ಸಂಖ್ಯೆ:28105/1998 (KAT-S) ದಿನಾಂಕ:01-02-2001.

4) ಕರ್ನಾಟಕ ಆಡಳಿತ ನ್ಯಾಯ ಮಂಡಳಿ ಆದೇಶ ಸಂಖ್ಯೆ: 1504/1996, ದಿನಾಂಕ: 11-12-2001.

5) ಅಡಿಷನಲ್ ಪೊಲೀಸ್ ಕಮೀಷನರ್, (ಆಡಳಿತ ಮತ್ತು ಸಿಎಆರ್) ಬೆಂಗಳೂರು ನಗರ ಇವರ ಆದೇಶ ಸಂಖ್ಯೆ:47/ಅಪೀಲು/93, ಓಬಿ ಸಂಖ್ಯೆ:312/2002, ದಿನಾಂಕ:23-01-2002.

6) ಅರ್ಜಿದಾರರ ಪುನರ್ ಪರಿಶೀಲನಾ ಮನವಿ ದಿನಾಂಕ:28-02-2005

7) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ರವರ ಪತ್ರ ಸಂಖ್ಯೆ: ಅಪೀಲು/2/111/2002-03, ದಿನಾಂಕ:03-11-2005.

**ಪ್ರಸ್ತಾವನೆ:-**

ಶ್ರೀ ಹೆಚ್.ವಿ.ಶಿವಣ್ಣ, ಮಾಜಿ ಹೆಚ್‌ಸಿ-2419 ಇವರು ಈ ಹಿಂದೆ ಬೌರಿಂಗ್ ಆಸ್ಪತ್ರೆ ಪೊಲೀಸ್ ಠಾಣೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ, ದಿನಾಂಕ:24-04-1984ರಂದು ಸಂತ ಆಂತೋಣಿ ದೇವರ ಜಾತ್ರೆ ಸಮಯದಲ್ಲಿ ಕರ್ತವ್ಯ ಲೋಪವೆಸಗಿದರೆನ್ನಲಾದ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ಆರೋಪ ಸಾಬೀತಾಗಿಲ್ಲವೆಂದು ಸಲ್ಲಿಸಿದ ವಿಚಾರಣಾಧಿಕಾರಿಯ ವರದಿಯನ್ನೊಪ್ಪದೆ, ಶಿಸ್ತು ಪ್ರಾಧಿಕಾರಿಯು ಅರ್ಜಿದಾರರನ್ನು ದಿನಾಂಕ:28-07-1993ರ ಆದೇಶದಲ್ಲಿ ಸೇವೆಯಿಂದ ವಜಾ ಮಾಡಿರುತ್ತಾರೆ. ಈ ಆದೇಶದ ವಿರುದ್ಧ ಸಲ್ಲಿಸಿದ ಮೇಲ್ಮನವಿಯನ್ನು ಪರಿಶೀಲಿಸಿ, ಮೇಲ್ಮನವಿಯನ್ನು ತಿರಸ್ಕರಿಸಿ, ಅಮಾನತ್ತಿನ ಅವಧಿ ದಿನಾಂಕ:19-06-1984 ರಿಂದ 25-03-1987 ರವರೆಗೆ ಅಮಾನತ್ತೆಂದೇ ಪರಿಗಣಿಸಿರುತ್ತಾರೆ. ಈ ಎರಡೂ ಆದೇಶಗಳ ವಿರುದ್ಧ ಸಲ್ಲಿಸಿದ ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸರ್ಕಾರವು ಪರಿಶೀಲಿಸಿ, ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ದಿನಾಂಕ:30-11-1994ರ ಆದೇಶದಲ್ಲಿ ತಿರಸ್ಕರಿಸಿದೆ.

ಈ ಎಲ್ಲಾ ಆದೇಶಗಳ ವಿರುದ್ಧ ಅರ್ಜಿದಾರರು ಕರ್ನಾಟಕ ಆಡಳಿತ ನ್ಯಾಯ ಮಂಡಳಿಯಲ್ಲಿ ಸಂಖ್ಯೆ: 1504/96ರ ಅರ್ಜಿ ಸಲ್ಲಿಸಿದ್ದು, ನ್ಯಾಯ ಮಂಡಳಿಯು ದಿನಾಂಕ:20-03-1998ರಂದು ಅರ್ಜಿಯನ್ನು ಪುರಸ್ಕರಿಸಲು ಯಾವುದೇ ಗುಣಮಟ್ಟದ ಅಂಶಗಳಿಲ್ಲವೆಂದು ತೀರ್ಪು ನೀಡಿದೆ. ಈ ಕೆಎಟಿಯ ಆದೇಶದ ವಿರುದ್ಧ ಅರ್ಜಿದಾರರು ರಾಜ್ಯ ಉಚ್ಛ ನ್ಯಾಯಾಲಯದಲ್ಲಿ ಸಂಖ್ಯೆ:28105/1998 (KAT-S) ರಿಟ್ ಅರ್ಜಿಯನ್ನು ಸಲ್ಲಿಸಿದ್ದು, ಪ್ರಕರಣವನ್ನು ಪರಿಶೀಲಿಸಿದ ರಾಜ್ಯ ಉಚ್ಛ ನ್ಯಾಯಾಲಯವು ಕೆಎಟಿಯ ತೀರ್ಪಿನಲ್ಲಿನ ಲೋಪದೋಷಗಳನ್ನು ಗುರುತಿಸಿ, ಪ್ರಕರಣವನ್ನು ಕೆಎಟಿ ಗೆ ರವಾನೆ ಮಾಡಿ, ಪುನರ್ ಪರಿಶೀಲಿಸಿ ಆದೇಶ ಹೊರಡಿಸಲು ದಿನಾಂಕ:01-02-2001ರಂದು ತೀರ್ಪು ನೀಡಿರುತ್ತದೆ. ಈ ತೀರ್ಪಿನನ್ವಯ ಕೆಎಟಿ ಯು ದಿನಾಂಕ:11-12-2001ರಂದು ತೀರ್ಪು ನೀಡಿ, ಶಿಸ್ತು ಪ್ರಾಧಿಕಾರಿ, ಮೇಲ್ಮನವಿ ಪ್ರಾಧಿಕಾರಿ ಹಾಗೂ ಪರಿಷ್ಕರಣ ಮೇಲ್ಮನವಿ ಪ್ರಾಧಿಕಾರದ ಆದೇಶಗಳನ್ನು ತಳ್ಳಿಹಾಕಿ, ಅರ್ಜಿದಾರರನ್ನು ಪುನರ್ ಸೇವೆಗೆ ಸ್ಥಾಪಿಸಲು 3 ತಿಂಗಳ ಅವಧಿಯೊಳಗೆ ಕ್ರಮ ಕೈಗೊಳ್ಳಲು ಸೂಚಿಸಿದ ಮೇರೆಗೆ ಶಿಸ್ತು ಪ್ರಾಧಿಕಾರಿಯು ಅರ್ಜಿದಾರರನ್ನು ಸೇವೆಗೆ ಪುನರ್ ನೇಮಕ ಮಾಡಿ, ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೇ ಪರಿಗಣಿಸಿ ಸೇವೆಯಿಂದ ಹೊರಗುಳಿದ ಅವಧಿಯನ್ನು ಅವರ ಖಾತೆಯಲ್ಲಿರುವ/ಲಭ್ಯವಿರುವ ರಜೆಯನ್ನಾಗಿ ಪರಿಗಣಿಸಿ ದಿನಾಂಕ:23-01-2002ರಂದು ಆದೇಶ ಹೊರಡಿಸಿರುತ್ತಾರೆ.

ಈ ಆದೇಶದ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪುನರ್ ಪರಿಶೀಲನಾ ಮನವಿ ಸಲ್ಲಿಸಿ, ಸರ್ಕಾರದ ಸುತ್ತೋಲೆ ಸಂಖ್ಯೆ:ಸಿಆಸುಇ 9 ಸೇಇವಿ 95, ದಿನಾಂಕ:26-06-1996ರಲ್ಲಿ ಒಂದು ವೇಳೆ ಆಪಾದಿತ ಸರ್ಕಾರಿ ನೌಕರನು ಕ್ರಿಮಿನಲ್ ನ್ಯಾಯಾಲಯದಲ್ಲಿ ಖುಲಾಸೆ (acquit) ಆದರೆ, ಶಿಸ್ತು ಪ್ರಾಧಿಕಾರಿಯು ಆದೇಶವನ್ನು ಪರಿಷ್ಕರಿಸಬಹುದೆಂದೂ, ಒಂದು ವೇಳೆ ಸರ್ಕಾರಿ ನೌಕರರನ್ನು ಪುನರ್ ಸೇವೆಗೆ ನೇಮಕ ಮಾಡಿಕೊಂಡಲ್ಲಿ, ಆತನು ಸೇವೆಯಲ್ಲಿ ಮುಂದುವರಿದಿದ್ದರೆ, ಅರ್ಹನಾಗಿರುತ್ತಿದ್ದಂತಹ ಎಲ್ಲಾ ಸೌಲಭ್ಯಗಳಿಗೂ ಹಕ್ಕುಳ್ಳವನಾಗುತ್ತಾನೆ ಎಂದಿರುವ ಕಾರಣ, ತನ್ನ ಮೇಲಿನ ಎಲ್ಲಾ ನ್ಯಾಯಾಲಯಗಳಲ್ಲೂ, ಎಲ್ಲಾ ಹಂತದಲ್ಲೂ ಆರೋಪದಿಂದ ಮುಕ್ತಗೊಳಿಸಿ, ತೀರ್ಪು ನೀಡಿದ್ದರೂ, ತನಗೆ ಶಿಸ್ತು ಪ್ರಾಧಿಕಾರಿ ಅನ್ಯಾಯ ಮಾಡಿರುವುದಾಗಿ, ಇದನ್ನು ಸರಿಪಡಿಸಿ, ಎಲ್ಲಾ ಸೌಲಭ್ಯಗಳನ್ನು ನೀಡುವಂತೆ ಕೋರಿರುತ್ತಾರೆ. ಪ್ರಸ್ತಾವನೆಯನ್ನು ನ್ಯಾಯಾಲಯಗಳ ತೀರ್ಪಿನ ಹಿನ್ನೆಲೆಯಲ್ಲಿ ಹಾಗೂ ಸರ್ಕಾರಿ ಸುತ್ತೋಲೆ ದಿನಾಂಕ:26-06-1996ರ ಹಿನ್ನೆಲೆಯಲ್ಲಿ ಪರಿಶೀಲಿಸಿದ ನಂತರ ಅರ್ಜಿದಾರರಿಗೆ ಎಲ್ಲಾ ಸವಲತ್ತುಗಳನ್ನು ನೀಡಲು ನಿರ್ಧರಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 358 ಪೊಸಿಅ 2005 ಬೆಂಗಳೂರು, ದಿನಾಂಕ:09ನೇ ಜೂನ್ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ದಿನಾಂಕ:23-01-2002ರ ಶಿಸ್ತು ಪ್ರಾಧಿಕಾರಿ ಹಾಗೂ ಅಡಿಷನಲ್ ಪೊಲೀಸ್ ಕಮೀಷನರ್ ಆಡಳಿತ ಮತ್ತು ಸಿಎಆರ್, ಬೆಂಗಳೂರು ನಗರ ಇವರ ಆದೇಶವನ್ನು ಭಾಗಶ: ಮಾರ್ಪಡಿಸಿ, ಶ್ರೀ ಹೆಚ್.ವಿ.ಶಿವಣ್ಣ, ಹೆಚ್‌ಸಿ-2419 (ಈ ಹಿಂದೆ ಹೆಚ್‌ಸಿ-1459) ಇವರು ದಿನಾಂಕ:28-02-2005 ರಂದು ಸರ್ಕಾರಕ್ಕೆ ಸಲ್ಲಿಸಿದ ಪುನರ್ ಪರಿಶೀಲನಾ ಮನವಿಯನ್ನು ಪುರಸ್ಕರಿಸಿ, ನ್ಯಾಯಾಲಯ ತೀರ್ಪಿನ ಹಾಗೂ ಸರ್ಕಾರಿ

ಸುತ್ತೋಲೆ ಸಂಖ್ಯೆ:ಸಿಆಸುಇ 9 ಸೇಇವಿ 95 ದಿನಾಂಕ:26-06-1996 ರಲ್ಲಿನ ಸೂಚನೆಗಳನ್ವಯ ಈ ಕೆಳಕಂಡಂತೆ ಆದೇಶಿಸಿದೆ.

1. ಅರ್ಜಿದಾರರು ಅಮಾನತ್ತಿನಲ್ಲಿ ಕಳೆದ (ದಿನಾಂಕ:19-06-1984 ರಿಂದ 25-03-1987 ರವರೆಗೆ) ಅವಧಿಯನ್ನು `ಕರ್ತವ್ಯದ ಮೇಲೆ` ಇದ್ದಂತೆ ಎಂದೂ ಹಾಗೂ
2. ಸೇವೆಯಿಂದ ವಜಾಗೊಂಡ ಆದೇಶ ದಿನಾಂಕದಿಂದ ಸೇವೆಗೆ ಪುನರ್ ನೇಮಕಗೊಂಡು ಹಾಜರಾದ ದಿನಾಂಕದ ವರೆಗಿನ ಅವಧಿಯನ್ನೂ ಸಹ ಕರ್ತವ್ಯದ ಮೇಲಿದ್ದಂತೆ ಎಂದೂ ಪರಿಗಣಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 945

**ಸಿ.ಬಸವರಾಜು**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು).

**ವಿಷಯ:** ಶ್ರೀ ಹೆಚ್.ಸಿ.ರಂಗಸ್ವಾಮಿ, ಪಿಸಿ-2119, ಬೆಂಗಳೂರು ನಗರ ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಬಗ್ಗೆ.

**ಓದಲಾಗಿದೆ:** 1) ಶಿಸ್ತು ಪ್ರಾಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಪೊಲೀಸ್, ಉತ್ತರ ವಿಭಾಗ, ಬೆಂಗಳೂರು ನಗರ ಇವರ ಆದೇಶ ಸಂಖ್ಯೆ:4 / ಡಿಇ / ಆರ್-6 / ಉವ / 97-99, ದಿನಾಂಕ: 30-01-1999.

2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಅಡಿಷನಲ್ ಪೊಲೀಸ್ ಕಮೀಷನರ್, ಆಡಳಿತ ಬೆಂಗಳೂರು ನಗರ ಇವರ ಆದೇಶ ಸಂಖ್ಯೆ:78/ಅಪೀಲು/98-99, ದಿನಾಂಕ:23-07-1999.

3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:04-02-2003.

4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು/2/104/2002-03, ದಿನಾಂಕ:23-05-2003.

5) ಪೊಲೀಸ್ ಆಯುಕ್ತರು, ಬೆಂಗಳೂರು ನಗರ ಇವರ ಪತ್ರ ಸಂಖ್ಯೆ: 78/ಅಪೀಲು/98-99, ದಿನಾಂಕ:06-12-2004.

6) ಕರ್ನಾಟಕ ಲೋಕ ಸೇವಾ ಆಯೋಗದ ಪತ್ರ ಸಂಖ್ಯೆ:ಪಿಎಸ್‌ಸಿ 37 / CNS / 05, ದಿನಾಂಕ:26-05-2006.

**ಪ್ರಸ್ತಾವನೆ:-**

ಶ್ರೀ ಹೆಚ್.ಸಿ.ರಂಗಸ್ವಾಮಿ, ಪಿಸಿ-2119 ಬೆಂಗಳೂರು ನಗರ, ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965ರ ನಿಯಮ 6ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:**

"ನೀವು ಯಲಹಂಕ ಉಪ ನಗರ ಪೊಲೀಸ್ ಠಾಣೆಯಲ್ಲಿ ಪೊಲೀಸ್ ಪೇದೆಯಾಗಿ ಕರ್ತವ್ಯನಿರ್ವಹಿಸುತ್ತಿದ್ದು, ದೊಡ್ಡ ಬೆಟ್ಟಹಳ್ಳಿ, ವಾಸಿಯಾದ ಒಬ್ಬ ಅಮಾಯಕನಾದ ಶ್ರೀ ಮಂಜುನಾಥ ಎಂಬುವವರಿಗೆ ಠಾಣೆಗೆ ಕರೆದುಕೊಂಡು ಬಂದು, ಹಿಂಸಿಸಿ ಮನೆಯಿಂದ ರೂ.2000-00ಗಳನ್ನು ತರುವಂತೆ ಬೆದರಿಕೆ ಹಾಕಿ ಕಳುಹಿಸಿದ್ದು, ಪುನ: ನೀವು ಮಂಜುನಾಥನ ಮನೆಗೆ ಹೋಗಿ ಬೆದರಿಕೆ ಹಾಕಿ ಮತ್ತೆ ಠಾಣೆಗೆ ಕರೆದುಕೊಂಡು ಬಂದು ಪಿಎಸ್‌ಐ ರವರ ಮುಂದೆ ಹಾಜರುಪಡಿಸಿ ಅಮಾಯಕ ಅಸಾಮಿಯ ತಂದೆ ಮತ್ತು ಅಣ್ಣನವರ ಕಡೆಯಿಂದ ರೂ.1,500-00ಗಳನ್ನು ಪಡೆದುಕೊಂಡು ವಿನಾಕಾರಣ ಒಬ್ಬ ಅಮಾಯಕ ನಿರಾಪರಾಧಿಯನ್ನು ಹಿಂಸಿಸಿ ಹಣ ಪಡೆದುಕೊಂಡಿರುತ್ತೀರಿ."

"ನೀವು ಶಿಸ್ತು ಇಲಾಖೆಯಲ್ಲಿದ್ದುಕೊಂಡು, ಅನಾವಶ್ಯಕವಾಗಿ ಠಾಣೆಗೆ ಕರೆದುಕೊಂಡು ಬಂದು ಹಿಂಸಿಸಿ ಅಧಿಕಾರವನ್ನು ದುರುಪಯೋಗಪಡಿಸಿಕೊಂಡಿರುತ್ತೀರಾ. ಇದು ನೀವು ಕರ್ತವ್ಯದಲ್ಲಿ ತೋರಿಸಿದ ಅಸಭ್ಯ ವರ್ತನೆ ಹಾಗೂ ಕರ್ತವ್ಯ ಲೋಪವಾಗಿರುತ್ತದೆ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಪೊಲೀಸ್, ಉತ್ತರ ವಿಭಾಗ, ಬೆಂಗಳೂರು ನಗರ, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ:30-01-1999ರ ಆದೇಶದಲ್ಲಿ ಅರ್ಜಿದಾರರನ್ನು ಸೇವೆಯಿಂದ ವಜಾ ಮಾಡಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಅಡಿಷನಲ್ ಪೊಲೀಸ್ ಕಮೀಷನರ್, ಬೆಂಗಳೂರು ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲದಿದ್ದರೂ, ಮಾನವೀಯ ದೃಷ್ಟಿಯಿಂದ ಅರ್ಜಿದಾರರ ಮೇಲ್ಮನವಿಯನ್ನು ಪುರಸ್ಕರಿಸಿ, ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ:23-07-1999ರ ಆದೇಶದಲ್ಲಿ ಶಿಸ್ತು ಪ್ರಾಧಿಕಾರಿ ಆದೇಶವನ್ನು ಮಾರ್ಪಡಿಸಿ, ಅರ್ಜಿದಾರರನ್ನು ಕರ್ತವ್ಯಕ್ಕೆ ಪುನರ್ ನೇಮಕ ಮಾಡಿ, ಅವರ ವೇತನವನ್ನು ಪೊಲೀಸ್ ಪೇದೆ ಹುದ್ದೆಯ ಕನಿಷ್ಟ ಮಟ್ಟಕ್ಕೆ ಶಾಶ್ವತವಾಗಿ ಇಳಿಸಿ, ಹೊಸದಾಗಿ ವಾರ್ಷಿಕ ವೇತನ ಬಡ್ತಿ ಗಳಿಸುವ ದಂಡನೆ ವಿಧಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರು ಸರ್ಕಾರಿ ಸೇವೆಗೆ 1984ರಲ್ಲಿ ಸೇರಿದ್ದು, ಇವರ ವಿರುದ್ಧ ಯಾವುದೇ ಗುರುತರ ಆರೋಪಗಳಿಲ್ಲದಿರುವುದನ್ನು ಗಮನಿಸಲಾಗಿದೆ. ಶಿಸ್ತು ಪ್ರಾಧಿಕಾರಿ ವಿಧಿಸಿರುವ ದಂಡನೆಯನ್ನು ಮೇಲ್ಮನವಿ ಪ್ರಾಧಿಕಾರಿ ಮಾನವೀಯ ದೃಷ್ಟಿಯಿಂದ ಮಾರ್ಪಡಿಸಿದ್ದರೂ, ಮೇಲ್ಮನವಿ ಪ್ರಾಧಿಕಾರಿ ವಿಧಿಸಿರುವ ದಂಡನೆಯು ಕೆಸಿಎಸ್‌ಆರ್ ನ ನಿಯಮ 59ಕ್ಕೆ ವಿರುದ್ಧವಾಗಿ ರುತ್ತದೆ. ಆದ್ದರಿಂದ ಮೇಲ್ಮನವಿ ಪ್ರಾಧಿಕಾರಿಯ ದಂಡನೆಯನ್ನು ಭಾಗಶ: ಮಾರ್ಪಡಿಸಿ, ಅರ್ಜಿದಾರರ ವಾರ್ಷಿಕ ವೇತನ ಬಡ್ತಿಯನ್ನು ಪೊಲೀಸ್ ಪೇದೆ ಹುದ್ದೆಯ ಕನಿಷ್ಟ ಮಟ್ಟಕ್ಕೆ ಸಂಚಿತ ಪರಿಣಾಮ ರಹಿತವಾಗಿ ಎರಡು ವರ್ಷಗಳ ಅವಧಿಗೆ ಇಳಿಸಲು, ಈ ಅವಧಿಯಲ್ಲಿ ಯಾವುದೇ ವಾರ್ಷಿಕ ವೇತನ ಬಡ್ತಿ ಗಳಿಸದೇ, ದಂಡನಾ ಅವಧಿಯ ನಂತರ ದಂಡನೆ ವಿಧಿಸಿದ ಹಿಂದಿನ ದಿನಾಂಕದಂದು ಪಡೆಯುತ್ತಿದ್ದ ವೇತನಕ್ಕೆ ನಿಗದಿ ಪಡಿಸಿ, ಅಲ್ಲಿಂದ ವಾರ್ಷಿಕ ವೇತನ ಬಡ್ತಿ ಪಡೆಯಲು ಹಾಗೂ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೇ ಪರಿಗಣಿಸಲು ಉದ್ದೇಶಿಸಿ, ಕರ್ನಾಟಕ ಲೋಕ ಸೇವಾ ಆಯೋಗದ ಅಭಿಪ್ರಾಯ ಕೋರಲಾಗಿತ್ತು. ಕರ್ನಾಟಕ ಲೋಕ ಸೇವಾ ಆಯೋಗವು ದಿನಾಂಕ:26-05-2006ರ ತನ್ನ ಪತ್ರದಲ್ಲಿ ಸರ್ಕಾರ ಉದ್ದೇಶಿಸಿದ ಮಾರ್ಪಡಿಗೆ ತನ್ನ ಸಹಮತಿ ನೀಡಿದೆ. ಅದರಂತೆ ಈ ಕೆಳಕಂಡ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 15 ಪೊಸಿಅ 2003 ಬೆಂಗಳೂರು, ದಿನಾಂಕ:09ನೇ ಜೂನ್ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಮೇಲ್ಮನವಿ ಪ್ರಾಧಿಕಾರಿ ಹಾಗೂ ಅಡಿಷನಲ್ ಪೊಲೀಸ್ ಕಮೀಷನರ್, ಆಡಳಿತ ಬೆಂಗಳೂರು ಇವರ ದಿನಾಂಕ:23-07-1999ರ ಆದೇಶವನ್ನು ಭಾಗಶ: ಮಾರ್ಪಡಿಸಿ, ಶ್ರೀ ಹೆಚ್.ಸಿ.ರಂಗಸ್ವಾಮಿ, ಪೊಲೀಸ್ ಪೇದೆ-2119 ಬೆಂಗಳೂರು ನಗರ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ದಿನಾಂಕ: 04-02-2003ರ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಪುರಸ್ಕರಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

1. ಅರ್ಜಿದಾರರ ವೇತನವನ್ನು ಪಿಸಿ ಹುದ್ದೆಯ ವೇತನ ಶ್ರೇಣಿಯ ಕನಿಷ್ಟ ಮಟ್ಟಕ್ಕೆ ಎರಡು ವರ್ಷಗಳ ಅವಧಿಗೆ ಸಂಚಿತ ಪರಿಣಾಮ ರಹಿತವಾಗಿ ಇಳಿಸಿ, ಈ ಅವಧಿಯಲ್ಲಿ ಯಾವುದೇ ವಾರ್ಷಿಕ ವೇತನ ಬಡ್ತಿಗಳಿಸದೇ, ದಂಡನಾ ಅವಧಿ ಮುಗಿದ ನಂತರ, ದಂಡನಾದೇಶದ ಹಿಂದಿನ ದಿನಾಂಕದಂದು ಪಡೆಯುತ್ತಿದ್ದ, ವೇತನಕ್ಕೆ ನಿಗದಿ ಪಡಿಸಿ, ಅಲ್ಲಿಂದ ವಾರ್ಷಿಕ ವೇತನ ಬಡ್ತಿಗಳಿಸತಕ್ಕದ್ದು.
2. ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೇ ಪರಿಗಣಿಸುವುದು.
3. ಈ ಆದೇಶವು ಶಿಸ್ತು ಪ್ರಾಧಿಕಾರಿ ಹೊರಡಿಸಿದ ಆದೇಶ ದಿನಾಂಕದಿಂದಲೇ ಜಾರಿಗೆ ಬರತಕ್ಕದ್ದು.

ಈ ಆದೇಶವನ್ನು ಕರ್ನಾಟಕ ಲೋಕ ಸೇವಾ ಆಯೋಗದ ದಿನಾಂಕ:26-05-2006ರ ಪತ್ರದಲ್ಲಿನ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 944

**ಸಿ.ಬಸವರಾಜು**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು).

**ವಿಷಯ:** ಶ್ರೀ ಪ್ರಭಾಕರ್, ಎಎಸ್ಐ., ಟ್ರಾಫಿಕ್ ಪೊಲೀಸ್ ಠಾಣೆ, ಬೀದರ್ ಜಿಲ್ಲೆ, ರವರ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:** 1) ಶಿಸ್ತು ಪ್ರಾಧಿಕಾರಿ ಹಾಗೂ ಡಿವೈ.ಎಸ್.ಪಿ., ಬೀದರ್ ಇವರ ಆದೇಶ ಸಂಖ್ಯೆ:7 / ಪಿಆರ್ / ಜಿಎಸ್‌ಡಿ / 04 ದಿನಾಂಕ:15-05-2004.

2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಬೀದರ್, ಇವರ ಆದೇಶ ಸಂಖ್ಯೆ:ಸಿಬ್ಬಂದಿ / 4 /ಲಶಿ / ಪಿಆರ್ / 2 ಜಿಎಸ್‌ಡಿ / ಅಪೀಲು / 04, ಆಪು ಸಂಖ್ಯೆ:215/2004, ದಿನಾಂಕ:20-09-2004.

3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:05-07-2005

4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು/2/89/2005, ದಿನಾಂಕ:06-03-2006.

**ಪ್ರಸ್ತಾವನೆ:-**

ಶೀ ಪ್ರಭಾಕರ್, ಪಿಎಸ್ಐ, ಟ್ರಾಫಿಕ್ ಪೊಲೀಸ್ ಠಾಣೆ, ಬೀದರ್ ಜಿಲ್ಲೆ, ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965ರ ನಿಯಮ 7ರಡಿ ದೋಷರೋಪಣಾ ಪತ್ರ ಹೊರಡಿಸಲಾಗಿದೆ.

**1.ದೋಷರೋಪಣೆ:**

"ದಿನಾಂಕ:03-03-2004ರಂದು ಬೆಳಿಗ್ಗೆ 09-00 ಘಂಟೆಯಿಂದ 13-00 ಘಂಟೆಯವರೆಗೆ ಕರಿಯಪ್ಪ ಸರ್ಕಲ್‌ನಲ್ಲಿ ಸಂಚಾರ ಕರ್ತವ್ಯಕ್ಕೆ ನೇಮಕ ಮಾಡಿದ್ದು, 09-30 ಘಂಟೆಗೆ ಪಿಐ ಸಂಚಾರಿ ಪೊಲೀಸ್ ಠಾಣೆ ರವರು ಚೆಕ್ ಮಾಡಿದಾಗ, ಗೈರುಹಾಜರಿದ್ದು, 09-45 ಘಂಟೆಗೆ ಕರ್ತವ್ಯಕ್ಕೆ ವಿಳಂಬ ಮಾಡಿ ಬಂದಿದ್ದು, ಮತ್ತು ಕರ್ತವ್ಯದಲ್ಲಿ ಸಮವಸ್ತ್ರವನ್ನು ಹೊಲಸಾಗಿ ಧರಿಸಿದ ಬಗ್ಗೆ."

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಡಿವೈ.ಎಸ್.ಪಿ., ಬೀದರ್, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ:15-05-2004ರ ಆದೇಶದಲ್ಲಿ

ಅರ್ಜಿದಾರರ ಮುಂಬರುವ ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಮುಂಬಡ್ತಿಗೆ ಧಕ್ಕೆ ಆಗದಂತೆ ಒಂದು ವರ್ಷದ ಅವಧಿಗೆ ಮುಂದೂಡಿದ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಬೀದರ್, ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ:20-09-2004ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ದೋಷಾರೋಪಣಾ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಸಮವಸ್ತ್ರವನ್ನು ಸರಿಯಾದ ಸಮಯಕ್ಕೆ ತಂದಿಟ್ಟುಕೊಂಡು, ಕರ್ತವ್ಯಕ್ಕೆ ನಿಗದಿತ ವೇಳೆಗಿಂತ ಮುಂಚೆಯೇ ಹಾಜರಿರಬೇಕಾದಂತಹ ಅತ್ಯಾವಶ್ಯಕ ಸೇವೆಯಲ್ಲಿದ್ದರೂ, ತಡವಾಗಿ ಬಂದು ಸಮವಸ್ತ್ರ ಕೊಳಕಾಗಿ ಧರಿಸಿದ್ದು, ಇವರ ಬೇಜವಾಬ್ದಾರಿತನಕ್ಕೆ ಸಾಕ್ಷಿ ಆಗಿರುತ್ತದೆ. ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನಾ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 155 ಪೊಸಿಅ 2006 ಬೆಂಗಳೂರು, ದಿನಾಂಕ:02ನೇ ಜೂನ್ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಪ್ರಭಾಕರ್, ಎಎಸ್ಐ, ಟ್ರಾಫಿಕ್ ಪೊಲೀಸ್ ಠಾಣೆ, ಬೀದರ್ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ದಿನಾಂಕ:05-07-2005ರ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 920

**ಸಿ.ಬಸವರಾಜು**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು).

**FOREST, ECOLOGY AND ENVIRONMENT SECRETARIAT**

**Sub:** Constitution of Search Committee to suggest a panel of names for the post of Chairman, Karnataka State Pollution Control Board.

**Preamble:-**

1. In the Order dt. 10-2-2006 on I.A. No. 2/2006 of the Hon'ble High Court of Karnataka the operation of the Single Bench order of the Hon'ble High Court in W.P. No.21732/2005 has been stayed to the extent that the incumbent Chairman, Karnataka State Pollution Control Board (KSPCB) was entitled to continue as Chairman, KSPCB for a period of 3 years from 26-2-2004. The term of appointment of the incumbent Chairman has expired on 27-12-2005. Hence it has become expedient to appoint a person who possesses the requisite qualification / experience in terms of Section 4 of the Water (Prevention & Control of Pollution) Act, 1974 as Chairman, KSPCB. Government has felt it necessary to constitute a Search Committee for the purpose of drawing up a panel of names of eligible and qualified persons for selection to the post of Chairman, KSPCB. Hence the following.

**GOVERNMENT ORDER No. FEE 46 EAA 2005, BANGALORE, DATED 29TH MAY 2006**

2. A Search Committee consisting of the following is constituted to prepare a panel of names of persons eligible for appointment as Chairman, Karnataka State Pollution Control Board fulfilling the academic qualification / experience prescribed under Section 4 of the Water (Prevention and Control of Pollution) Act, 1974;

1. Chief Secretary to Govt. .. Chairman
2. Prof. Sriniketan
   Prof. & HoD of Chemical Engineering
   National Institute of Technology, Karnataka
   Surthkal .. Member
3. Sri R.J. Katti,
   Prof. & HoD of Aquatic Biology &
   Environment, College of Fisheries
   Mangalore. .. Member

3. The Committee shall submit the panel as expeditiously as possible not later than a month.

4. The Members of the Search Committee are eligible to TA/DA as admissible to them. Expenditure in this regard shall be debitable to the funds of the KSPCB.

By Order and in the name of the Governor of Karnataka

P.R. 867

**N.R. Jaganmatha**

Under Secretary to Government

Forest, Ecology & Environment Dept.

**ಕನ್ನಡ ಮತ್ತು ಸಂಸ್ಕೃತಿ ಸಚಿವಾಲಯ**

**ವಿಷಯ:** ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯದ ಯೋಜನೆ ಹಾಗೂ ಯೋಜನೇತರ ಹುದ್ದೆಗಳನ್ನು ದಿನಾಂಕ 1–4–2006ರಿಂದ 31–3–2007ರವರೆಗೆ ಮುಂದುವರೆಸುವ ಬಗ್ಗೆ

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ಸಂಕಇ 81 ಕೆಎಂಯು 2005 ದಿನಾಂಕ 31–5–2005
2) ಸರ್ಕಾರದ ಆದೇಶ ಸಂಖ್ಯೆ: ಸಂಕಇ 8 ಸ್ವೀಮರ 2005 ದಿನಾಂಕ 16–9–2005
3) ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು ಇವರ ಪತ್ರ ಸಂಖ್ಯೆ ಡಿಎಎಂ:ಇಎಸ್‌ಟಿ–1:ಸಿಬ್ಬಂದಿ:2005–06 ದಿನಾಂಕ 08–03–2006

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಸರ್ಕಾರದ ಆದೇಶದಲ್ಲಿ ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ, ನಿರ್ದೇಶನಾಲಯದ 39 ಹುದ್ದೆಗಳನ್ನು ಕಮಿಟೆಡ್ ಯೋಜನೇತರ ಅಡಿಯಲ್ಲಿಯು ಹಾಗೂ 11 ಹುದ್ದೆಗಳನ್ನು ಯೋಜನೆಯಡಿಯಲ್ಲಿಯು 31–3–2006ರವರೆಗೆ ಮುಂದುವರೆಸಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಸರ್ಕಾರದ ಆದೇಶದಲ್ಲಿ ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ನಿರ್ದೇಶನಾಲಯದಲ್ಲಿ ದಿನಾಂಕ 1–4–2005ರ ಅಂತ್ಯಕ್ಕೆ ಖಾಲಿ ಇರುವ ಹುದ್ದೆಗಳಲ್ಲಿ ಶೇಕಡ 80ರಷ್ಟು ಹುದ್ದೆಗಳನ್ನು ರದ್ದುಗೊಳಿಸಲಾಗಿದ್ದು, ಅದರ ಪರಿಣಾಮವಾಗಿ ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ ರವರಿಂದ ಬಂದಿರುವ ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಪತ್ರದಲ್ಲಿ ಯೋಜನೆಯ 7 ಹುದ್ದೆಗಳನ್ನು ಹಾಗೂ ಯೋಜನೇತರ 26 ಹುದ್ದೆಗಳನ್ನು (ಒಟ್ಟು 33 ಹುದ್ದೆಗಳು) ದಿನಾಂಕ 1–4–2006 ರಿಂದ 31–3–2007ರವರೆಗೆ ಮುಂದುವರಿಸಿ ಆದೇಶ ಹೊರಡಿಸಬೇಕೆಂದು ಕೋರಿರುತ್ತಾರೆ.

ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯದ ನಿರ್ದೇಶಕರ ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಂಕಇ 50 ಕೆಎಂಯು 2006 ಬೆಂಗಳೂರು, ದಿನಾಂಕ 26ನೇ ಮೇ 2006**

ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯದ 2006–07ನೇ ಸಾಲಿನ ಆಯವ್ಯಯ ಅಪೆಂಡಿಕ್ಸ್–ಬಿ ರಡಿಯಲ್ಲಿ ನಮೂದಾಗಿರುವ ಯೋಜನೆ–ಯೋಜನೇತರ ಒಟ್ಟು 33 ಹುದ್ದೆಗಳನ್ನು ಈ ಕೆಳಕಂಡಂತೆ ದಿನಾಂಕ 1–4–2006ರಿಂದ 31–3–2007 ರವರೆಗೆ ಒಂದು ವರ್ಷದ ಅವಧಿಗೆ ಮುಂದುವರೆಸಿ ಆದೇಶಿಸಿದೆ.

**I. ಲೆಕ್ಕಶೀರ್ಷಿಕೆ 2205–00–103–0–01 (ಯೋಜನೆ)**

(1) ಉಪನಿರ್ದೇಶಕರು – 1
(2) ಪುರಾತತ್ವ ಸಹಾಯಕರು – 2
(3) ಅಟೆಂಡರ್ – 1

---------
4 ಹುದ್ದೆಗಳು

**II. ಲೆಕ್ಕಶೀರ್ಷಿಕೆ 2205–00–107–0–01 (ಯೋಜನೆ)**

(1) ಕ್ಯೂರೇಟರ್ – 3

-----------
3 ಹುದ್ದೆಗಳು

**III. ಲೆಕ್ಕಶೀರ್ಷಿಕೆ 2205–00–103–0–01 (ಯೋಜನೇತರ)**
**(ಕಮಿಟೆಡ್ ನಾನ್ ಪ್ಲಾನ್)**

(1) ಸಹಾಯಕ ನಿರ್ದೇಶಕರು (ವಸ್ತುಸಂಗ್ರಹಾಲಯಗಳ ಅಭಿವೃದ್ಧಿ) – 1
(2) ಪುರಾತತ್ವ ಸಹಾಯಕರು – 1
(3) ಮಾನ್ಯುಮೆಂಟ್ಸ್ ಅಟೆಂಡೆಂಟ್ಸ್ – 5

-----------
7 ಹುದ್ದೆಗಳು

**IV. ಲೆಕ್ಕಶೀರ್ಷಿಕೆ 2205–00–107–0–01 (ಯೋಜನೇತರ)**
**(ಕಮಿಟೆಡ್ ನಾನ್ ಪ್ಲಾನ್)**

(1) ಕ್ಯೂರೇಟರ್ – 2
(2) ದ್ವಿತೀಯ ದರ್ಜೆ ಸಹಾಯಕರು – 5
(3) ಅಟೆಂಡರ್ – 1
(4) ಗ್ರೂಪ್–ಡಿ – 8
(5) ಫ್ಯೂನ್ – 2
(6) ರಾತ್ರಿಕಾವಲುಗಾರ – 1

-----------
19 ಹುದ್ದೆಗಳು

ಘೋಷ್ವಾರೆ

1] ಯೋಜನೆ ಹುದ್ದೆಗಳು – 7
2] ಕಮಿಟೆಡ್ ಯೋಜನೇತರ ಹುದ್ದೆಗಳು – 26
------------
ಒಟ್ಟು ಹುದ್ದೆಗಳು 33
------------

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ ಇಡಿ 407 ಐಎಫ್(ಬಿಎ) 2006 ದಿನಾಂಕ 3–5–2006 ರಲ್ಲಿ ನೀಡಿರುವ ಸಹಮತಿಯನ್ವಯ ಹಾಗೂ ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 96 ದಿನಾಂಕ 10–7–96ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ಪ್ರದತ್ತವಾದ ಅಧಿಕಾರದ ಪ್ರತ್ಯಾಯೋಜನೆಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 836

**ಕೆ.ಸಾಂಬಶಿವಂ**
ಪೀಠಾಧಿಕಾರಿ,
ಕನ್ನಡ ಮತ್ತು ಸಂಸ್ಕೃತಿ ಇಲಾಖೆ, (ಆಡಳಿತ ಕನ್ನಡ)

**ವಿಷಯ:** ಶ್ರೀಮತಿ ಉಷಾ ಸುರೇಶ್, ನಿರ್ದೇಶಕರು, ರಾಜ್ಯ ಪತ್ರಾಗಾರ ಇಲಾಖೆ, ಮುಂಬೈ ಪ್ರವಾಸಕ್ಕೆ ಅನುಮತಿ ಕುರಿತು

**ಓದಲಾಗಿದೆ:** ನಿರ್ದೇಶಕರು, ರಾಜ್ಯ ಪತ್ರಾಗಾರ ಇಲಾಖೆ ಅವರ ಪತ್ರ ಸಂಖ್ಯೆ: ಎಆರ್‌ಎಸ್ 11 ಎನ್‌ಎಐ 2006 ದಿನಾಂಕ 29–4–2006

**ಪ್ರಸ್ತಾವನೆ**

ನಿರ್ದೇಶಕರು, ರಾಜ್ಯ ಪತ್ರಾಗಾರ ಇಲಾಖೆ ಮೇಲೆ ಓದಲಾದ ದಿನಾಂಕ 29–4–2006ರ ಪತ್ರದಲ್ಲಿ ರಾಜ್ಯ ಪತ್ರಾಗಾರಕ್ಕೆ ಸಂಬಂಧಪಟ್ಟ ದಾಖಲೆಗಳು ಮಹಾರಾಷ್ಟ್ರ ರಾಜ್ಯ ಪತ್ರಾಗಾರದಲ್ಲಿದ್ದು ಅವುಗಳ ಪರಿವೀಕ್ಷಣೆ ಮಾಡಿ ಪ್ರತಿಗಳನ್ನು ಪಡೆಯುವ ಕಾರ್ಯಕ್ಕಾಗಿ ಮಹಾರಾಷ್ಟ್ರ ಪತ್ರಾಗಾರ ಇಲಾಖೆ, ಮುಂಬೈಗೆ ಪ್ರವಾಸ ಕೈಗೊಳ್ಳಲು ಅನುಮತಿ ಕೋರಿರುತ್ತಾರೆ.

ಇದನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಂಕಇ 13 ರಾಪಸಿ 2006 ಬೆಂಗಳೂರು, ದಿನಾಂಕ 29ನೇ ಮೇ 2006**

ಸರ್ಕಾರವು ದಿನಾಂಕ 5–6–2006ರಿಂದ 9–6–2006ರವರೆಗೆ ಪ್ರಸ್ತಾವನೆಯಲ್ಲಿ ವಿವರಿಸಿರುವ ಉದ್ದೇಶಕ್ಕಾಗಿ ಮುಂಬೈ ಪ್ರವಾಸ ಕೈಗೊಳ್ಳಲು ನಿರ್ದೇಶಕರು, ರಾಜ್ಯ ಪತ್ರಾಗಾರ ಇಲಾಖೆ ಅವರಿಗೆ ಈ ಮೂಲಕ ಅನುಮತಿ ನೀಡಿರುತ್ತದೆ. ಪ್ರವಾಸ ಮುಗಿದ ನಂತರ ನಿರ್ದೇಶಕರು, ಪ್ರವಾಸ ಕುರಿತು ಒಂದು ವರದಿಯನ್ನು ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 838

**ಎಂ.ಎಸ್. ಶಿವರಾಮ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ ಮತ್ತು ಸಂಸ್ಕೃತಿ ಇಲಾಖೆ, (ಆಡಳಿತ ಕನ್ನಡ)

**ವಿಷಯ:** ಕನ್ನಡ ಅಭಿವೃದ್ಧಿ ಪ್ರಾಧಿಕಾರದ 2006-07ನೇ ಸಾಲಿನ ಮುಂದುವರಿದ ಯೋಜನಾ ಕಾರ್ಯಕ್ರಮಗಳಿಗೆ ಅನುಮೋದನೆ ನೀಡುವ ಬಗ್ಗೆ

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ: ಸಂಕಇ 60 ಸ್ವೀಮರ 2006 ದಿನಾಂಕ 7-4-2006

2) ಕಾರ್ಯದರ್ಶಿ, ಕನ್ನಡ ಅಭಿವೃದ್ಧಿ ಪ್ರಾಧಿಕಾರ, ಬೆಂಗಳೂರು ಅವರ ಪತ್ರ ಸಂಖ್ಯೆ ಕಅಪ್ರಾ/ ಕಾ/ ಲೆಕ್ಕ:ಯೋಜನೆ / 1 / 2006-07 ದಿನಾಂಕ 5-5-2006

**ಪ್ರಸ್ತಾವನೆ:**

ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ವ್ಯಾಪ್ತಿಯ ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಮುಂದುವರಿಕೆ ಕಾರ್ಯಕ್ರಮಗಳಿಗೆ ಮೇಲೆ (1)ರಲ್ಲಿ ಓದಲಾದ ದಿನಾಂಕ 7-4-2006ರ ಸರ್ಕಾರದ ಆದೇಶದಲ್ಲಿ ಅನುಮೋದನೆ ನೀಡಲಾಗಿದೆ. ಕಾರ್ಯದರ್ಶಿ, ಕನ್ನಡ ಅಭಿವೃದ್ಧಿ ಪ್ರಾಧಿಕಾರ ಅವರು ಮೇಲೆ (2)ರಲ್ಲಿ ಓದಲಾದ ದಿನಾಂಕ 5-5-2006ರ ಪತ್ರದಲ್ಲಿ ಸದರಿ ಅನುಮತಿಯನ್ವಯ ಸಿದ್ಧಪಡಿಸಿದ ಕಾರ್ಯಕ್ರಮಗಳಿಗೆ ಅನುಮೋದನೆ ನೀಡುವಂತೆ ಕೋರಿದ್ದಾರೆ. ಇದನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಂಕಇ 18 ಕೆಓಎಲ್ 2006 ಬೆಂಗಳೂರು, ದಿನಾಂಕ:19ನೇ ಜೂನ್ 2006.**

ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಏಪ್ರಿಲ್ 2006ರಿಂದ ಜೂನ್ 2006ರವರೆಗೆ ನಡೆಸಲು ಉದ್ದೇಶಿಸಿರುವ ಈ ಕೆಳಕಂಡ ಕಾರ್ಯಕ್ರಮಗಳಿಗೆ ಈ ಮೂಲಕ ಸರ್ಕಾರದ ಅನುಮತಿ ನೀಡಲಾಗಿದೆ.

ಏಪ್ರಿಲ್-2006ರಿಂದ ಜೂನ್ 2006ರವರೆಗೆ ನಡೆಸಲು ಉದ್ದೇಶಿಸಿರುವ ಯೋಜನೆ ಕಾರ್ಯಕ್ರಮಗಳು ಈ ಕೆಳಕಂಡಂತಿವೆ:

| ಕ್ರಮ ಸಂಖ್ಯೆ | ಕಾರ್ಯಕ್ರಮಗಳು | ಬೇಕಾಗುವ ಹಣ (ಲಕ್ಷ ರೂಪಾಯಿಗಳಲ್ಲಿ) | ಷರಾ |
|---|---|---|---|
| 1. | ಧಾರ್ಮಿಕ ಮತ್ತು ಭಾಷಾ ಅಲ್ಪಸಂಖ್ಯಾತರಿಗೆ ಕನ್ನಡ ಕಲಿಕಾ ಯೋಜನೆ | 1.00 | |
| 2. | ಆಕರ ಸಾಹಿತ್ಯ ಯೋಜನೆ | 0.25 | |
| 3. | ಕನ್ನಡ ಸಂಸ್ಕೃತಿ ಶಿಬಿರಗಳು | 0.80 | |
| 4. | ಆಡಳಿತದಲ್ಲಿ ಕನ್ನಡ ಅನುಷ್ಠಾನ | 1.00 | |
| 5. | ಜನತೆಯತ್ತ ಕನ್ನಡ | 0.35 | |
| 6. | ನಾಡಗೀತೆಗಳ ಮೂಲಕ ಕನ್ನಡ ಪ್ರಚಾರ | 0.10 | |
| 7. | ಗಡಿಜಿಲ್ಲೆಗಳಲ್ಲಿ ಗಡಿ ಉತ್ಸವ | 1.50 | |
| | ಒಟ್ಟು | 5.00 | |

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಆಇ 1 ಟಿಎಫ್‌ಪಿ 96 ದಿನಾಂಕ 10-7-96ರಲ್ಲಿ ಇಲಾಖಾ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿದ ಅಧಿಕಾರದನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 957

**ಎಂ.ಎಸ್.ಶಿವರಾಮ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಕನ್ನಡ ಮತ್ತು ಸಂಸ್ಕೃತಿ ಇಲಾಖೆ (ಆಡಳಿತ ಕನ್ನಡ)

**ವಿಷಯ:** ಕರ್ನಾಟಕ ರಾಜ್ಯ ಪತ್ರಾಗಾರ ಇಲಾಖೆಯ ವೈಜ್ಞಾನಿಕ ಅಧಿಕಾರಿ ಹುದ್ದೆಯನ್ನು ಮುಂದುವರಿಸುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರಿ ಆದೇಶ ಸಂಖ್ಯೆ ಸಂಕಇ 5 ರಾಪಸಿ 04 ದಿನಾಂಕ:31-5-2004.
2) ಸರ್ಕಾರಿ ಆದೇಶ ಸಂಖ್ಯೆ ಸಂಕಇ 12 ರಾಪಸಿ 2005 ದಿನಾಂಕ 17-5-2005.
3) ಸರ್ಕಾರಿ ಆದೇಶ ಸಂಖ್ಯೆ: ಸಂಕಇ 8 ಸ್ವೀಮರ 2005, ದಿನಾಂಕ: 16.9.2005.
4) ಕರ್ನಾಟಕ ರಾಜ್ಯ ಪತ್ರಾಗಾರ ಇಲಾಖೆಯ ನಿರ್ದೇಶಕರ ಪತ್ರ ಸಂಖ್ಯೆ: ಎಆರ್‌ಎಸ್ 4 ಇ ಎಸ್ ಟಿ 2006 ದಿನಾಂಕ: 21.1.2006.

**ಪ್ರಸ್ತಾವನೆ:**

ಮೇಲೆ (1) ರಲ್ಲಿ ಓದಲಾದ ದಿನಾಂಕ: 31–5–2004ರ ಸರ್ಕಾರಿ ಆದೇಶದಲ್ಲಿ ಕರ್ನಾಟಕ ರಾಜ್ಯ ಪತ್ರಾಗಾರ ನಿರ್ದೇಶನಾಲಯದಲ್ಲಿ ಈ ಕೆಳಕಂಡ 3 ಹುದ್ದೆಗಳನ್ನು ಸೃಜಿಸಲಾಗಿತ್ತು.

1) ಸಂರಕ್ಷಣಾ ವಿಭಾಗಕ್ಕೆ ವೈಜ್ಞಾನಾಧಿಕಾರಿ 1 ಹುದ್ದೆ
2) ಸಂರಕ್ಷಣಾ ಸಹಾಯಕ 1 ಹುದ್ದೆ
3) ಸಂರಕ್ಷಣಾ ಅಟೆಂಡರ್ 1 ಹುದ್ದೆ

ಈ ಹುದ್ದೆಗಳನ್ನು ಕಾಲ ಕಾಲಕ್ಕೆ ಮುಂದುವರೆಸುತ್ತಾ ಬಂದಿದ್ದು, ಮೇಲೆ 2 ರಲ್ಲಿ ಓದಲಾದ ದಿನಾಂಕ:17–5–2005ರ ಸರ್ಕಾರಿ ಆದೇಶದಲ್ಲಿ ಈ ಹುದ್ದೆಗಳನ್ನು ದಿನಾಂಕ: 31.3.2006 ರ ವರೆಗೆ ಮುಂದುವರೆಸಲಾಯಿತು. ಈ ಮಧ್ಯೆ ಮೇಲೆ (3)ರಲ್ಲಿ ಓದಲಾದ ದಿನಾಂಕ: 16–9–2005ರ ಸರ್ಕಾರಿ ಆದೇಶದಲ್ಲಿ ವೈಜ್ಞಾನಿಕ ಅಧಿಕಾರಿಯ ಹುದ್ದೆಯನ್ನುಳಿದು ಇತರ 2 ಹುದ್ದೆಗಳನ್ನು ರದ್ದುಪಡಿಸಲಾಯಿತು. ನಿರ್ದೇಶಕರು, ರಾಜ್ಯ ಪತ್ರಾಗಾರ ಇಲಾಖೆ ಅವರು ಮೇಲೆ (4) ರಲ್ಲಿ ಓದಲಾದ ದಿನಾಂಕ: 21–1–2006ರ ಪತ್ರದಲ್ಲಿ ವೈಜ್ಞಾನಿಕಾಧಿಕಾರಿ (ಗ್ರೂಪ್ ಎ) ಹುದ್ದೆಯನ್ನು ಮಾತ್ರ ದಿನಾಂಕ: 1.4.2006 ರಿಂದ ಮುಂದಿನ ಅವಧಿಗೆ ಮುಂದುವರೆಸಬೇಕೆಂದು ಕೋರಿರುತ್ತಾರೆ. ಸದರಿಯವರ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಆದೇಶ ಸಂಖ್ಯೆ ಸಂಕಇ 2 ರಾಪಸಿ 2006 ಬೆಂಗಳೂರು, ದಿನಾಂಕ:31ನೇ ಮೇ 2006.**

ಕರ್ನಾಟಕ ರಾಜ್ಯ ಪತ್ರಾಗಾರ ನಿರ್ದೇಶನಾಲಯದ ಸಂರಕ್ಷಣಾ ವಿಭಾಗದಲ್ಲಿ ಯೋಜನೆಯಡಿಯಲ್ಲಿ ಸೃಜಿಸಲಾಗಿರುವ ವೈಜ್ಞಾನಿಕಾಧಿಕಾರಿ ಹುದ್ದೆಯನ್ನು (ವೇತನ ಶ್ರೇಣಿ ರೂ. 7400–13120 ಗ್ರೂಪ್– ಎ) ದಿನಾಂಕ: 1.4.2006ರಿಂದ 31.3.2007ರವರೆಗೆ ಒಂದು ವರ್ಷದ ಅವಧಿಗೆ ತಾತ್ಕಾಲಿಕವಾಗಿ ಮುಂದುವರೆಸಲಾಗಿದೆ.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರು ಟಿಪ್ಪಣಿ ಸಂಖ್ಯೆ: ಇಡಿ 421 ಐಎಫ್ (ಬಿಎ) 2006 ದಿನಾಂಕ: 15.5.2006 ರಲ್ಲಿ ನೀಡಿದ ಸಹಮತಿಯಂತೆ ಹಾಗೂ ಸರ್ಕಾರಿ ಆದೇಶ ಸಂಖ್ಯೆ: ಎಫ್ ಡಿ 1 ಟಿಎಫ್‌ಪಿ 96 ದಿನಾಂಕ 10–7–96 ಅನ್ವಯ ಇಲಾಖಾ ಪ್ರಧಾನ ಕಾರ್ಯದರ್ಶಿಯವರಿಗೆ ಪ್ರದತ್ತವಾದ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 837

**ಎಂ.ಎಸ್.ಶಿವರಾಮ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ ಮತ್ತು ಸಂಸ್ಕೃತಿ ಇಲಾಖೆ (ಆಡಳಿತ ಕನ್ನಡ)

**ವಿಷಯ:** ಕರ್ನಾಟಕ ರಾಜ್ಯ ಪತ್ರಾಗಾರ ಇಲಾಖೆ ಯೋಜನೆಯಡಿ ಪತ್ರಪಾಲಕರ ಹುದ್ದೆಯನ್ನು ಮುಂದುವರಿಸುವ ಬಗ್ಗೆ

**ಓದಲಾಗಿದೆ:**
1) ಸರ್ಕಾರಿ ಆದೇಶ ಸಂಖ್ಯೆ ಸಂಕಇ 109 ಸ್ವಿಮರ 97 ದಿನಾಂಕ 4-8-97
2) ಸರ್ಕಾರಿ ಆದೇಶ ಸಂಖ್ಯೆ ಸಂಕಇ 9 ರಾಪಸಿ 2005 ದಿನಾಂಕ 20-6-2005
3) ಸರ್ಕಾರಿ ಆದೇಶ ಸಂಖ್ಯೆ ಸಂಕಇ 8 ಸ್ವಿಮರ 2005 ದಿನಾಂಕ 16-9-2005
4) ಕರ್ನಾಟಕ ರಾಜ್ಯ ಪತ್ರಾಗಾರ ನಿರ್ದೇಶನಾಲಯದ ನಿರ್ದೇಶಕರ ಪತ್ರ ಸಂಖ್ಯೆ ಎಆರ್‌ಎಸ್ 4 ಇಎಸ್‌ಟಿ 2006 ದಿನಾಂಕ 21-1-2006 ಹಾಗೂ ದಿನಾಂಕ 6-3-2006

**ಪ್ರಸ್ತಾವನೆ:**

ರಾಜ್ಯ ಪತ್ರಾಗಾರ ಇಲಾಖೆಯಲ್ಲಿ ಪತ್ರಪಾಲಕರ ಒಂದು ಹುದ್ದೆ ಹಾಗೂ ವಾಹನ ಚಾಲಕರ ಒಂದು ಹುದ್ದೆಯನ್ನು ಮೇಲೆ (1)ರಲ್ಲಿ ಓದಲಾದ 4-8-97ರ ಸರ್ಕಾರಿ ಆದೇಶದಲ್ಲಿ ಸೃಜಿಸಿ ಕಾಲಕಾಲಕ್ಕೆ ಮುಂದುವರಿಸಲ್ಪಟ್ಟು ಮೇಲೆ (2)ರಲ್ಲಿ ಓದಲಾದ ದಿನಾಂಕ 20-6-2005ರ ಸರ್ಕಾರಿ ಆದೇಶದಲ್ಲಿ 1-4-2005ರಿಂದ 31-3-2006ರವರೆಗೆ ಮುಂದುವರಿಸಲಾಗಿದೆ. ಮುಂದುವರಿದು, ಮೇಲೆ (3)ರಲ್ಲಿ ಓದಲಾದ ದಿನಾಂಕ 16-9-2005ರ ಆದೇಶದಲ್ಲಿ ವಾಹನ ಚಾಲಕರ ಹುದ್ದೆಯನ್ನು ರದ್ದುಪಡಿಸಲಾಗಿತ್ತು. ನಿರ್ದೇಶಕರು, ರಾಜ್ಯ ಪತ್ರಾಗಾರ ಇಲಾಖೆ ಅವರು ಮೇಲೆ (4)ರಲ್ಲಿ ಓದಲಾದ ದಿನಾಂಕ 21-1-2006ರ ಪತ್ರದಲ್ಲಿ ಪತ್ರಪಾಲಕರ ಹುದ್ದೆಯನ್ನು ದಿನಾಂಕ 1-4-2006ರಿಂದ ಮುಂದುವರಿಸುವಂತೆ ಕೋರಿದ್ದಾರೆ. ಇದನ್ನು ಪರಿಗಣಿಸಿದ ಸರ್ಕಾರವು ಮುಂದಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ ಸಂಕಇ 3 ರಾಪಸಿ 2006 ಬೆಂಗಳೂರು, ದಿನಾಂಕ: 26ನೇ ಮೇ 2006**

ಸರ್ಕಾರವು ರಾಜ್ಯ ಪತ್ರಾಗಾರ ಇಲಾಖೆಯಲ್ಲಿ ಸೃಜಿಸಲಾದ ಒಂದು ಪತ್ರಪಾಲಕರ ಗ್ರೂಪ್-ಎ (ಕಿರಿಯ ಶ್ರೇಣಿ) ಹುದ್ದೆಯನ್ನು (ವೇತನ ಶ್ರೇಣಿ 7400-13120) ದಿನಾಂಕ 1-4-2006ರಿಂದ ಒಂದು ವರ್ಷದ ಅವಧಿಗೆ ಮುಂದುವರಿಸುತ್ತದೆ. ಸರ್ಕಾರಿ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 96 ದಿನಾಂಕ 10-7-96ರಲ್ಲಿ ಪ್ರಧಾನ ಕಾರ್ಯದರ್ಶಿಯವರಿಗೆ ಪ್ರದತ್ತವಾದ ಆದಿಕಾರದನ್ವಯ ಹಾಗೂ ಅನಧಿಕೃತ ಟಿಪ್ಪಣಿ ಸಂಖ್ಯೆ ಇಡಿ 419 ಐಎಫ್(ಬಿಎ) 2006 ದಿನಾಂಕ 15-5-2006ರಲ್ಲಿ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಆಂತರಿಕ ಆರ್ಥಿಕ ಸಲಹೆಗಾರರ, ಸಹಮತಿ ಪಡೆದು ಈ ಆದೇಶವನ್ನು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 841

**ಎಂ.ಎಸ್.ಶಿವರಾಮ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ ಮತ್ತು ಸಂಸ್ಕೃತಿ ಇಲಾಖೆ (ಆಡಳಿತ ಕನ್ನಡ)

**ವಿಷಯ:** ಶ್ರೀ ವೆಂ.ಶ್ರೀನಿವಾಸ್ ಜಂಟಿ ನಿರ್ದೇಶಕರವರ ಬೆಂಗಳೂರು–ಹೈದರಾಬಾದ್–ಬೀದರ್ ನಡುವಣ ಪ್ರಯಾಣಕ್ಕೆ ಅನುಮತಿ ನೀಡುವ ಬಗ್ಗೆ.

**ಓದಲಾಗಿದೆ:** ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ಇವರ ಅರೆ ಸರ್ಕಾರಿ ಪತ್ರ ಸಂ:ಕಸನಿ 3/ ನಿಆಶಾ: 2005–06, ದಿನಾಂಕ: 16.02.2006.

**ಪ್ರಸ್ತಾವನೆ:–**

ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಇವರು ಮೇಲೆ ಓದಲಾದ ದಿನಾಂಕ: 16–02–2006ರ ಪತ್ರದಲ್ಲಿ ಬೀದರ್‌ನಲ್ಲಿ ದಿನಾಂಕ:27–01–2006 ರಂದು ನಡೆದ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ಭಾಗವಹಿಸುವ ಸಲುವಾಗಿ ಶ್ರೀ ವೆಂ.ಶ್ರೀನಿವಾಸ್ ಅಂದಿನ ಜಂಟಿ ನಿರ್ದೇಶಕರು ಇವರನ್ನು ಕಾರ್ಯಕ್ರಮಕ್ಕೆ ನಿಯೋಜಿಸಲಾಗಿದ್ದು, ಈ ಸಂಬಂಧ ಅವರು ಬೆಂಗಳೂರು–ಹೈದರಾಬಾದ್–ಬೀದರ್ ಮಾರ್ಗದಲ್ಲಿ ದಿನಾಂಕ: 27–01–2006 ಹಾಗೂ 29–01–2006 ರಂದು ವಿಮಾನ ಪ್ರಯಾಣ ಮಾಡಿದ್ದು, ಇದಕ್ಕೆ ಅನುಮತಿ ನೀಡುವಂತೆ ಕೋರಿರುತ್ತಾರೆ. ಇದನ್ನು ಪರಿಶೀಲಿಸಿದ್ದು, ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಸಂಕಇ 30 ಕಸನಿ 2006, ಬೆಂಗಳೂರು, ದಿನಾಂಕ:26ನೇ ಮೇ 2006**

ಸರ್ಕಾರವು ಶ್ರೀ ವೆಂ.ಶ್ರೀನಿವಾಸ್, ಹಿಂದಿನ ಜಂಟಿ ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಅವರು 72ನೇ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ಪಾಲ್ಗೊಳ್ಳಲು ದಿನಾಂಕ:27–01–2006 ರಂದು ಬೆಂಗಳೂರಿನಿಂದ

ಹೈದರಾಬಾದ್ ಮೂಲಕ ಬೀದರ್‌ಗೆ, ದಿನಾಂಕ:29–01–2006 ರಂದು ಬೀದರ್‌ನಿಂದ ಹೈದರಾಬಾದ್ ಮೂಲಕ ಬೆಂಗಳೂರಿಗೆ ವಿಮಾನ ಪ್ರಯಾಣ ಮಾಡಿದ್ದಕ್ಕೆ ಈ ಮೂಲಕ ಅನುಮತಿ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 840

**ಎಂ.ಎಸ್.ಶಿವರಾಮ್**

ಸರ್ಕಾರದ ಅಧೀನ ಕಾರ್ಯದರ್ಶಿ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ

**ವಿಷಯ:** ಆಯುಕ್ತರು, ಸುವರ್ಣ ಕರ್ನಾಟಕ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಹಾಗೂ ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಅವರ ನಡುವೆ ವ್ಯವಹಾರಗಳನ್ನು ಹಂಚುವ ಬಗ್ಗೆ

**ಓದಲಾಗಿದೆ:** ಅಧಿಸೂಚನೆ ಸಂಖ್ಯೆ: ಸಿಆಸುಇ 92 ಆಸೇವ 2006 ದಿನಾಂಕ 31–5–2006

**ಪ್ರಸ್ತಾವನೆ:**

ಮೇಲೆ ಓದಲಾದ ದಿನಾಂಕ 31–5–2006ರ ಅಧಿಸೂಚನೆಯಲ್ಲಿ ವಿಶೇಷಾಧಿಕಾರಿ, ಸುವರ್ಣ ಕರ್ನಾಟಕ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಈ ಹುದ್ದೆಯನ್ನು ಆಯುಕ್ತರು, ಸುವರ್ಣ ಕರ್ನಾಟಕ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಎಂದು ಉನ್ನತೀಕರಿಸಿ ಶ್ರೀ ಕೆ.ಆರ್. ನಿರಂಜನ್, ಕೆ.ಎ.ಎಸ್ (ಸೂಪರ್ ಟೈಂ ಸ್ಕೇಲ್ ಅಧಿಕಾರಿ) ಅವರನ್ನು ಸದರಿ ಹುದ್ದೆಗೆ ನೇಮಿಸಲಾಗಿದೆ. ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಕಾರ್ಯಚಟುವಟಿಕೆಗಳು ಇತ್ತೀಚಿನ ವರ್ಷಗಳಲ್ಲಿ ಸಾಕಷ್ಟು ವಿಸ್ತಾರಗೊಂಡಿವೆ. ಅವುಗಳು ರಾಜ್ಯವ್ಯಾಪಿ ಹರಡಿಕೊಂಡಿದ್ದು ಬೇರೆ ಬೇರೆ ಇಲಾಖೆಗಳೊಡನೆ ಸಮನ್ವಯ ಸಾಧಿಸಿ ಸುವರ್ಣ ಕರ್ನಾಟಕ ಯೋಜನೆಯನ್ನು ಅನುಷ್ಠಾನಗೊಳಿಸಬೇಕು. ಸಧ್ಯದಲ್ಲಿಯೇ ಈ ಘಟಕದ ಆಶ್ರಯದಲ್ಲಿ ವಿಶ್ವ ಕನ್ನಡ ಸಮ್ಮೇಳನವನ್ನು ಸಹ ನಡೆಸಲು ಆಯೋಜಿಸಲಾಗಿದೆ. ಅಲ್ಲದೆ ಇತ್ತೀಚೆಗೆ ಹೊಸ ಹೊಸ ಪ್ರಶಸ್ತಿಗಳು ಸ್ಥಾಪಿಸಲ್ಪಟ್ಟಿವೆ. ಹಲವಾರು ಹೊಸ ಸಂಸ್ಥೆಗಳು ಇಲಾಖೆಯ ವ್ಯಾಪ್ತಿಗೆ ಇತ್ತೀಚಿನ ದಿನಗಳಲ್ಲಿ ಬಂದಿವೆ. ಇದರಿಂದಾಗಿ ಈ ಇಲಾಖೆಗೆ ಒದಗಿಸುತ್ತಿರುವ ಆಯವ್ಯಯದ ಮೊತ್ತವು ಸಹ ಇತ್ತೀಚಿನ ವರ್ಷಗಳಲ್ಲಿ ಗಣನೀಯವಾಗಿ ಹೆಚ್ಚಿದೆ. ಸುವರ್ಣ ಕರ್ನಾಟಕ ಉತ್ಸವವನ್ನು, ವಿಶ್ವ ಕನ್ನಡ ಸಮ್ಮೇಳನವನ್ನು, ಜಾನಪದ ಜಾತ್ರೆಯಂತಹ ಪ್ರಮುಖವಾದ ಘಟನೆಗಳನ್ನು ನಡೆಸುವುದು ಇಲಾಖೆಯ ಮೇಲೆ ಜವಾಬ್ದಾರಿಯಾಗಿ ಬಂದಿರುವ ಕಾರಣ ಆಯುಕ್ತರು, ಸುವರ್ಣ ಕರ್ನಾಟಕ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಹಾಗೂ ನಿರ್ದೇಶಕರ ನಡುವೆ ಕೆಲಸ ಕಾರ್ಯಗಳನ್ನು ಹಂಚಲು ಉದ್ದೇಶಿಸಿ ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಂಕಇ 34 ಕಸನಿ 2006 ಬೆಂಗಳೂರು, ದಿನಾಂಕ: 07ನೇ ಜೂನ್ 2006**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳಿಂದಾಗಿ ಸರ್ಕಾರವು ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಆಯುಕ್ತರು ಹಾಗೂ ನಿರ್ದೇಶಕರ ನಡುವೆ ಈ ಕೆಳಕಂಡಂತೆ ಕಾರ್ಯಗಳನ್ನು ಹಂಚಿಕೆ ಮಾಡುತ್ತದೆ:–

1] ಆಯುಕ್ತರು, ಸುವರ್ಣ ಕರ್ನಾಟಕ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಅವರು ಇಲಾಖೆಯ ಆಡಳಿತಾತ್ಮಕ ಮುಖ್ಯಸ್ಥ ರಾಗಿರುತ್ತಾರೆ. ಆಡಳಿತಾತ್ಮಕ ಜವಾಬ್ದಾರಿಗಳನ್ನು ಅವರು ವಹಿಸಿ ಕೊಳ್ಳುತ್ತಾರೆ. ಪ್ರಮುಖ ಆರ್ಥಿಕ ವಿಷಯಗಳನ್ನು ಸಹ ಆಯುಕ್ತರೇ ನಿರ್ವಹಿಸುತ್ತಾರೆ. ನೀತಿ ನಿರೂಪಣೆಗಳಿಗೆ ಸಂಬಂಧಪಟ್ಟ ತೀರ್ಮಾನಗಳು ಅವರ ಹಂತದಲ್ಲಿ ಆಗುತ್ತವೆ. ಇಲಾಖೆಯ ಪ್ರಮುಖ ನಿರ್ಧಾರಗಳು ಆಯುಕ್ತರ ಹಂತದಲ್ಲಿ ಕೈಗೊಳ್ಳಲ್ಪಡುತ್ತವೆ.

2] ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಅವರು ಆಯುಕ್ತರ ಆಡಳಿತ ನಿಯಂತ್ರಣದಲ್ಲಿ ಕಾರ್ಯನಿರ್ವಹಿಸುತ್ತಾರೆ. ದೈನಂದಿನ ಚಟುವಟಿಕೆಗಳನ್ನು ಅವರ ಹಂತದಲ್ಲಿ ಜರುಗಿಸುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 904

**ಎಂ.ಎಸ್.ಶಿವರಾಮ್**

ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ ಮತ್ತು ಸಂಸ್ಕೃತಿ ಇಲಾಖೆ (ಆಡಳಿತ ಕನ್ನಡ)

**ವಿಷಯ:** ಶ್ರೀಮತಿ ಉಷಾ ಸುರೇಶ್, ನಿರ್ದೇಶಕರು, ರಾಜ್ಯ ಪತ್ರಗಾರ ಇಲಾಖೆ - ಪ್ರಭಾರ ಭತ್ಯೆ ಮಂಜೂರು ಮಾಡುವ ಬಗ್ಗೆ

**ಓದಲಾಗಿದೆ:** 1) ಅಧಿಸೂಚನೆ ಸಂಖ್ಯೆ: ಸಂಕಇ 5 ರಾಪಸಿ 2005 ದಿನಾಂಕ 31-1-2005

2) ಅಧಿಸೂಚನೆ ಸಂಖ್ಯೆ: ಸಿಆಸುಇ 96 ಸೇಇಮು 2005 ದಿನಾಂಕ 15-3-2006

3) ನಿರ್ದೇಶಕರು, ರಾಜ್ಯ ಪತ್ರಾಗಾರ ಇಲಾಖೆ ಅವರ ಪತ್ರ ಸಂಖ್ಯೆ ಎಆರ್ಎಸ್ 10 ಇಎಸ್‌ಟಿ 2005 ದಿನಾಂಕ 22-4-2006

**ಪ್ರಸ್ತಾವನೆ:**

ರಾಜ್ಯ ಪತ್ರಾಗಾರ ಇಲಾಖೆಯಲ್ಲಿ ಉಪನಿರ್ದೇಶಕರಾಗಿ ಕಾರ್ಯ ನಿರ್ವಹಿಸುತ್ತಿದ್ದ ಶ್ರೀಮತಿ ಉಷಾ ಸುರೇಶ್ ಅವರನ್ನು ಮೇಲೆ (1)ರಲ್ಲಿ ಓದಲಾದ ದಿನಾಂಕ 31-1-2005ರ ಅಧಿಸೂಚನೆಯಲ್ಲಿ ಇಲಾಖೆಯ ನಿರ್ದೇಶಕರ ಹುದ್ದೆಯಲ್ಲಿ

ನಿವೃತ್ತಿ ಹೊಂದಿದ ಶ್ರೀ ಬಿ.ಶ್ರೀಧರ್ ಅವರ ಸ್ಥಾನದಲ್ಲಿ ಅಧಿಕ ಪ್ರಭಾರದಲ್ಲಿಡಲಾಗಿತ್ತು. ಮೇಲೆ (2)ರಲ್ಲಿ ಓದಲಾದ ದಿನಾಂಕ 15-3-2006ರ ಅಧಿಸೂಚನೆಯಲ್ಲಿ ಶ್ರೀಮತಿ ಉಷಾ ಸುರೇಶ್ ಅವರಿಗೆ ರಾಜ್ಯ ಪತ್ರಾಗಾರ ಇಲಾಖೆಯ ನಿರ್ದೇಶಕರ ಹುದ್ದೆಗೆ ಸ್ಥಾನಾಪನ್ನ ಬಡ್ತಿ ನೀಡಲಾಯಿತು. ಶ್ರೀಮತಿ ಉಷಾ ಸುರೇಶ್, ಅವರು ಮೇಲೆ (3)ರಲ್ಲಿ ಓದಲಾದ ದಿನಾಂಕ 22-4-2006ರ ಮನವಿ ಸಲ್ಲಿಸಿ ನಿರ್ದೇಶಕರ ಹುದ್ದೆಯಲ್ಲಿ ಅಧಿಕ ಪ್ರಭಾರದಲ್ಲಿದ್ದ ದಿನಾಂಕ 1-2-2005ರಿಂದ 14-3-2006ರ ಅವಧಿಗೆ ಪ್ರಭಾರ ಭತ್ಯೆಯನ್ನು ಮಂಜೂರು ಮಾಡಲು ಕೋರಿರುತ್ತಾರೆ.

ಇದನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಸಂಕಇ 6 ರಾಪಸಿ 2006 ಬೆಂಗಳೂರು, ದಿನಾಂಕ 26ನೇ ಮೇ 2006**

ಶ್ರೀಮತಿ ಉಷಾ ಸುರೇಶ್, ನಿರ್ದೇಶಕರು, ರಾಜ್ಯ ಪತ್ರಾಗಾರ ಇಲಾಖೆ ಅವರು ದಿನಾಂಕ 1-2-2005ರಿಂದ 14-3-2006ರವರೆಗೆ ಅಧಿಕ ಪ್ರಭಾರದಲ್ಲಿ ಕರ್ತವ್ಯ ನಿರ್ವಹಿಸಿದ್ದಕ್ಕಾಗಿ ಅವರಿಗೆ ಕೆ.ಸಿ.ಎಸ್.ಆರ್ಸ್. ನಿಯಮ 68ರನ್ವಯ ಪ್ರಭಾರ ಭತ್ಯೆಯನ್ನು ಈ ಮೂಲಕ ಮಂಜೂರು ಮಾಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 842

**ಎಂ.ಎಸ್.ಶಿವರಾಮ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ ಮತ್ತು ಸಂಸ್ಕೃತಿ ಇಲಾಖೆ (ಆಡಳಿತ ಕನ್ನಡ)

**ವಿಷಯ:** ಜಂಟಿ ಇಲಾಖಾ ವಿಚಾರಣೆ – 1) ಡಾ: ಎಂ.ವಿ.ಕೃಷ್ಣಪ್ಪ, ಹಿಂದಿನ ನಿರ್ದೇಶಕರು 2) ಎಸ್.ಎಂ.ಪೂಜಾರಿ, ಪುರಾತತ್ವ ಸಂರಕ್ಷಣಾ ಇಂಜಿನಿಯರ್ 3) ವಾಸುದೇವ 4) ಎನ್.ಡಿ.ಮೋಹನ್‌ಕುಮಾರ್ 5) ಜಿ.ಪಿ.ಕಲಾದಗಿ, ಪುರಾತತ್ವ ಸಂರಕ್ಷಣಾ ಸಹಾಯಕರುಗಳು 6) ಬಿ.ವಾಗೀಶ್, ಕಿರಿಯ ಇಂಜಿನಿಯರ್, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ ಅವರುಗಳ ವಿರುದ್ಧ – ಸಿಸಿಎ ನಿಯಮ 14–ಎ ರನ್ವಯ ಸನ್ಮಾನ್ಯ ಲೋಕಾಯುಕ್ತರಿಗೆ ವಹಿಸುವ ಬಗ್ಗೆ

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ಸಂಕಇ 83 ಕೆಎಂಯು 2002 ದಿ: 31–07–2002

2) ವರದಿ ಸಂಖ್ಯೆ ಕಂಪ್ಲೇಂಟ್ / ಉಪಲೋಕ್ / ಬಿಡಿ–81 / 2002 / ಎಆರ್‌ಇ–5 ದಿನಾಂಕ: 23–12–2003 ಸನ್ಮಾನ್ಯ ಲೋಕಾಯುಕ್ತರಿಂದ

**ಪ್ರಸ್ತಾವನೆ:**

ಶಿವಮೊಗ್ಗದ ಶಿವಪ್ಪ ನಾಯಕ ಅರಮನೆ ಹಾಗೂ ಉಡುಪಿ ಜಿಲ್ಲೆಯ ಸುರಾಲು ಮಣ್ಣಿನ ಅರಮನೆಗಳ ಸಂರಕ್ಷಣಾ ಕಾಮಗಾರಿಯಲ್ಲಿ ಅವ್ಯವಹಾರ ಹಾಗೂ ಹಣದ ದುರುಪಯೋಗ ನಡೆದಿದೆ ಎಂಬ ಆರೋಪಗಳು ಬಂದ ಕಾರಣ ಮೇಲೆ (1) ರಲ್ಲಿ ಓದಲಾದ ದಿನಾಂಕ: 31–07–2002ರ ಸರ್ಕಾರಿ ಆದೇಶದಲ್ಲಿ ಈ ಬಗ್ಗೆ ತನಿಖೆಯನ್ನು ಲೋಕಾಯುಕ್ತಕ್ಕೆ ವಹಿಸಲಾಗಿತ್ತು. ಈ ಬಗ್ಗೆ ತನಿಖೆ ನಡೆಸಿದ ಸನ್ಮಾನ್ಯ ಲೋಕಾಯುಕ್ತರು ಕರ್ನಾಟಕ ಲೋಕಾಯುಕ್ತ ಕಾಯಿದೆ 1984ರ ಸೆಕ್ಷನ್ 12(3)ರನ್ವಯ ಮೇಲೆ (2)ರಲ್ಲಿ ಓದಲಾದ ದಿನಾಂಕ: 23–12–2003ರ ವರದಿ ಸಲ್ಲಿಸಿ ಶಿವಮೊಗ್ಗದ ಶಿವಪ್ಪ ನಾಯಕ ಅರಮನೆ ಹಾಗೂ ಉಡುಪಿ ಜಿಲ್ಲೆ ಸುರಾಲು ಮಣ್ಣಿನ ಅರಮನೆ ಸಂರಕ್ಷಣಾ ಕಾಮಗಾರಿಯಲ್ಲಿ ಹಲವಾರು ಆರ್ಥಿಕ ಅಕ್ರಮಗಳು ನಡೆದಿದ್ದು ಅವುಗಳಿಗೆ ಇಲಾಖೆಯ ಈ ಕೆಳಕಂಡ ಅಧಿಕಾರಿ/ನೌಕರರು ಕಾರಣರಾಗಿದ್ದಾರೆಂದು ತಿಳಿಸಿದ್ದಾರೆ.

1) ಜಿ.ಪಿ. ಕಲಾದಗಿ, ಪುರಾತತ್ವ ಸಂರಕ್ಷಣಾ ಸಹಾಯಕ
2) ಬಿ.ವಾಗೀಶ್, ಜೂನಿಯರ್ ಇಂಜಿನಿಯರ್ (ವಿಶೇಷ ದರ್ಜೆ)
3) ಎನ್.ಡಿ. ಮೋಹನ್‌ಕುಮಾರ್, ಪುರಾತತ್ವ ಸಂರಕ್ಷಣಾ ಸಹಾಯಕ
4) ವಾಸುದೇವ, ಪುರಾತತ್ವ ಸಂರಕ್ಷಣಾ ಸಹಾಯಕ
5) ಚಿಕ್ಕರಂಗೇಗೌಡ, ಪುರಾತತ್ವ ಸಂರಕ್ಷಣಾ ಸಹಾಯಕ
6) ಪಿ.ಸತ್ಯನಾರಾಯಣರಾವ್, ಪುರಾತತ್ವ ಸಂರಕ್ಷಣಾ ಇಂಜಿನಿಯರ್
7) ಎಂ.ಡಿ.ರಾಜು, ಪುರಾತತ್ವ ಸಂರಕ್ಷಣಾ ಇಂಜಿನಿಯರ್
8) ಎಸ್.ಎಂ.ಪೂಜಾರಿ, ಪುರಾತತ್ವ ಸಂರಕ್ಷಣಾ ಇಂಜಿನಿಯರ್
9) ಡಾ: ಡಿ.ವಿ. ದೇವರಾಜ್, ನಿರ್ದೇಶಕರು
10) ಡಾ: ಎಂ.ವಿ.ಕೃಷ್ಣಪ್ಪ, ನಿರ್ದೇಶಕರು

ಮೇಲ್ಕಂಡ ಅಧಿಕಾರಿ ನೌಕರರ ವಿರುದ್ಧ ಪೂರ್ಣ ಪ್ರಮಾಣದ ಇಲಾಖಾ ವಿಚಾರಣೆಯನ್ನು ಲೋಕಾಯುಕ್ತ/ಉಪಲೋಕಾಯುಕ್ತಕ್ಕೆ ವಹಿಸಲು ಸನ್ಮಾನ್ಯ ಲೋಕಾಯುಕ್ತರು ಶಿಫಾರಸ್ಸು ಮಾಡಿದ್ದಾರೆ. ಈ ಶಿಫಾರಸ್ಸು ಮತ್ತು ವರದಿಗಳನ್ನು ಪರಿಶೀಲಿಸಲಾಗಿ ಮೇಲಿನ ಕ್ರಮಸಂಖ್ಯೆ 5, 6, 7 ಹಾಗೂ 9 ರಲ್ಲಿನ

ಅಧಿಕಾರಿ/ನೌಕರರು ನಿವೃತ್ತಿ ಹೊಂದಿದ್ದು, ಅವರುಗಳ ವಿರುದ್ಧ ನಿಯಮಗಳನ್ವಯ ಶಿಸ್ತುಕ್ರಮ ಜರುಗಿಸುವ ಕಾಲಾವಕಾಶ ಮುಗಿದಿದೆ. ಈ ಅಂಶಗಳನ್ನು ಗಮನಿಸಿದ ಸರ್ಕಾರವು ಸೇವೆಯಲ್ಲಿರುವ ಅಧಿಕಾರಿ/ನೌಕರರ ವಿರುದ್ಧ ಪೂರ್ಣ ಪ್ರಮಾಣದ ಇಲಾಖಾ ವಿಚಾರಣೆಯನ್ನು ಲೋಕಾಯಕ್ತಕ್ಕೆ ವಹಿಸಲು ತೀರ್ಮಾನಿಸಿ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಂಕಇ 83 ಕೆಎಂಯು 2002 ಬೆಂಗಳೂರು, ದಿನಾಂಕ: 17ನೇ ಜೂನ್ 2006**

ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 14-ಎ ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿದ ಸರ್ಕಾರವು ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆಯ ಈ ಮುಂದೆ ತಿಳಿಸಿದ ಅಧಿಕಾರಿ/ನೌಕರರ ವಿರುದ್ಧ ಮೇಲೆ ಹೇಳಿದ ಆರೋಪ ಕುರಿತು ಪೂರ್ಣ ಪ್ರಮಾಣದ ವಿಚಾರಣೆ ಹಾಗೂ ವರದಿಗಾಗಿ ಪ್ರಕರಣವನ್ನು ಸನ್ಮಾನ್ಯ ಲೋಕಾಯುಕ್ತ/ಉಪಲೋಕಾಯುಕ್ತರಿಗೆ ವಹಿಸುತ್ತದೆ.

1) ಡಾ: ಎಂ.ವಿ.ಕೃಷ್ಣಪ್ಪ, ಹಿಂದಿನ ನಿರ್ದೇಶಕರು
2) ಎಸ್.ಎಂ.ಪೂಜಾರಿ, ಪುರಾತತ್ವ ಸಂರಕ್ಷಣಾ ಇಂಜಿನಿಯರ್
3) ವಾಸುದೇವ
4) ಎನ್.ಡಿ.ಮೋಹನ್‌ಕುಮಾರ್
5) ಜಿ.ಪಿ. ಕಲಾದಗಿ, ಪುರಾತತ್ವ ಸಂರಕ್ಷಣಾ ಸಹಾಯಕರುಗಳು
6) ಬಿ.ವಾಗೀಶ್, ಕಿರಿಯ ಇಂಜಿನಿಯರ್ (ವಿಶೇಷ ದರ್ಜೆ)

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 958

**ಕೆ.ಸಾಂಬಶಿವಂ**
ಪೀಠಾಧಿಕಾರಿ,
ಕನ್ನಡ ಮತ್ತು ಸಂಸ್ಕೃತಿ ಇಲಾಖೆ, (ಆಡಳಿತ ಕನ್ನಡ)

**ಸಹಕಾರ ಸಚಿವಾಲಯ**

**ವಿಷಯ:** ನಾಗಮಂಗಲ, ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗೆ ಮಂಜೂರಾದ ಹುದ್ದೆಗಳನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ:ಸಿಎಂಡಬ್ಲ್ಯೂ/174/ಎಂಆರ್‌ಇ/96 ದಿನಾಂಕ:30/04/1997
2) ಸರ್ಕಾರದ ಆದೇಶ ಸಂಖ್ಯೆ:ಸಇ/263/ಎಂಆರ್‌ಇ/2006 ದಿನಾಂಕ:23/12/2002
3) ಆಯುಕ್ತರು, ಕೃಷಿ ಮಾರಾಟ ಇಲಾಖೆ, ಬೆಂಗಳೂರುರವರ ಪತ್ರಸಂಖ್ಯೆ: ಕೃಮಾಇ / 125/ ಸಿಬ್ಬಂದಿ-1(ಸಿ)05 ದಿನಾಂಕ:30/04/2005

**ಪ್ರಸ್ತಾವನೆ:**

ಕೃಷಿ ಮಾರಾಟ ಇಲಾಖೆಯ ಆಯುಕ್ತರು ದಿನಾಂಕ:30/04/2005 ರ ಪ್ರಸ್ತಾವನೆಯಲ್ಲಿ ಮೇಲೆ ಓದಲಾದ ಕ್ರಮಾಂಕ (1) ರಲ್ಲಿನ ಆದೇಶಾನುಸಾರ ನಾಗಮಂಗಲ, ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗೆ ಒಟ್ಟು 12 ಹುದ್ದೆಗಳನ್ನು ಸೃಷ್ಟಿಸಿ ಸರ್ಕಾರದ ಮಂಜೂರಾತಿ ನೀಡಲಾಗಿತ್ತು. ತದನಂತರ, ಸದರಿ ಹುದ್ದೆಗಳನ್ನು ವಿವಿಧ ಆದೇಶಗಳ ಮೂಲಕ ಕಾಲಕಾಲಕ್ಕೆ ತಾತ್ಕಾಲಿಕವಾಗಿ ಮುಂದುವರೆಸಲಾಗಿತ್ತು. ಮೇಲೆ ಓದಲಾದ (2) ರಲ್ಲಿನ ದಿನಾಂಕ:23/12/2002 ರ ಆದೇಶದಲ್ಲಿ ಸದರಿ ಹುದ್ದೆಗಳ ಅವಧಿಯನ್ನು ದಿನಾಂಕ:29/04/2005 ರವರೆಗೆ ವಿಸ್ತರಿಸಿ ಮಂಜೂರಾತಿ ನೀಡಲಾಗಿತ್ತು. ಸದರಿ ಹುದ್ದೆಗಳನ್ನು ದಿನಾಂಕ:30/04/2005 ರಿಂದ ಖಾಯಂಗೊಳಿಸಲು ಅಥವಾ ಖಾಯಂಗೊಳಿಸುವ ಪ್ರಕ್ರಿಯೆ ವಿಳಂಬವಾದಲ್ಲಿ ಪುನ: 2 ವರ್ಷಗಳ ಅವಧಿಗೆ ಮುಂದುವರೆಸಲು ಕೃಷಿ ಮಾರಾಟ ಇಲಾಖೆಯ ಆಯುಕ್ತರು ಪ್ರಸ್ತಾಪಿಸಿರುತ್ತಾರೆ. ಈ ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿದೆ. ಆದ್ದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ:ಸಇ 268 ಮಾಇಸೇ 2005 ಬೆಂಗಳೂರು ದಿನಾಂಕ:17ನೇ ಮೇ 2006**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳಿಂದಾಗಿ, ನಾಗಮಂಗಲ, ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗೆ ಮಂಜೂರಾದ ಈ ಕೆಳಕಂಡ ಹುದ್ದೆಗಳನ್ನು ತಾತ್ಕಾಲಿಕವಾಗಿ ದಿನಾಂಕ:30/04/2005 ರಿಂದ 29/04/2007 ರವರೆವಿಗೆ ಮುಂದುವರಿಸಲು ಸರ್ಕಾರದ ಮಂಜೂರಾತಿ ನೀಡಲಾಗಿದೆ:-

| ಕ್ರ.ಸಂ. | ಹುದ್ದೆಗಳ ಪದನಾಮ | ವೇತನ ಶ್ರೇಣಿ | ಹುದ್ದೆಗಳ ಸಂಖ್ಯೆ |
|---|---|---|---|
| 1 | ಕಾರ್ಯದರ್ಶಿ ದರ್ಜೆ-4 | 1900-3700 | 1 |
| 2 | ಲೆಕ್ಕಿಗ ದರ್ಜೆ -2 | 1280-2375 | 1 |
| 3 | ಮಾರುಕಟ್ಟೆ ಸಹಾಯಕ | 1040-1900 | 4 |
| 4 | ದ್ವಿತೀಯ ದರ್ಜೆ ಸಹಾಯಕ | 1040-1900 | 1 |
| 5 | ಬೆರಳಚ್ಚುಗಾರರು | 1040-1900 | 1 |

| | | | |
|---|---|---|---|
| 6 | ವಾಹನ ಚಾಲಕ | 1040–1900 | 1 |
| 7 | ಗ್ರೂಪ್ ಡಿ ಸಿಬ್ಬಂದಿ | 840–1300 | 3 |
| | **ಒಟ್ಟು** | | 12 |

ಈ ಬಗ್ಗೆ ತಗಲುವ ವೆಚ್ಚವನ್ನು ಲೆಕ್ಕ ಶೀರ್ಷಿಕೆ ಸಂಖ್ಯೆ:"3475–ಇತರೆ ಸಾಮಾನ್ಯ ಆರ್ಥಿಕ ಸೇವೆಗಳು–107–ಮಾರುಕಟ್ಟೆ ಕ್ರಮಪಡಿಸುವಿಕೆ–02–ಮಾರುಕಟ್ಟೆ ಸಮಿತಿಗಳು (ಯೋಜನೇತರ)" ರ ಅಡಿಯಲ್ಲಿ ಭರಿಸುವುದು.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರ ಅನಧಿಕೃತ ಟಿಪ್ಪಣಿ ಸಂಖ್ಯೆ:ಸಇ 11/ಆಂಅಸ(ಎ)/05 ದಿನಾಂಕ:10/04/2006 ಮತ್ತು ಸರ್ಕಾರದ ಆದೇಶ ಸಂಖ್ಯೆ:ಆಇ/01/ಟಿಎಫ್‌ಟಿ/96 ದಿನಾಂಕ:10/07/1996 ರಲ್ಲಿ ಇಲಾಖಾ ಕಾರ್ಯದರ್ಶಿಗಳಿಗೆ ಆರ್ಥಿಕ ಇಲಾಖೆಗೆ ನೀಡಲಾಗಿರುವ ಆರ್ಥಿಕ ಪ್ರತ್ಯಾಧಿಕಾರದ ಮೇರೆಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 922

**ಬಿ.ಎಸ್.ಜಾಪಾಲಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಸಹಕಾರ ಇಲಾಖೆ

**ವಿಷಯ:** ಕಲ್ಲಘಟಗಿ, ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗೆ ಮಂಜೂರಾದ ಹುದ್ದೆಗಳನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರದ ಆದೇಶ ಸಂಖ್ಯೆ:ಸಿಎಂಡಬ್ಲ್ಯೂ/38/ಎಂಎಂಡಿ/86 ದಿನಾಂಕ: 20/06/92
2) ಸರ್ಕಾರದ ಅಧಿಸೂಚನೆ ಸಂಖ್ಯೆ:ಸಿಎಂಡಬ್ಲ್ಯೂ/97/ಎಂಆರ್‌ಇ/95 ದಿನಾಂಕ: 13/03/1996
3) ಸರ್ಕಾರದ ಆದೇಶ ಸಂಖ್ಯೆ:ಸಇ/137/ಮಾಇಸೇ/2003 ದಿನಾಂಕ:30/06/2004
4) ಆಯುಕ್ತರು, ಕೃಷಿ ಮಾರಾಟ ಇಲಾಖೆ, ಬೆಂಗಳೂರುರವರ ಪತ್ರ ಸಂಖ್ಯೆ: ಕೃಮಾಇ/ 86/ ಸಿಬ್ಬಂದಿ–1(ಸಿ)04 ದಿನಾಂಕ:19/08/2005

**ಪ್ರಸ್ತಾವನೆ:**

ಕೃಷಿ ಮಾರಾಟ ಇಲಾಖೆಯ ಆಯುಕ್ತರು ದಿನಾಂಕ:19/08/2005 ರ ಪ್ರಸ್ತಾವನೆಯಲ್ಲಿ ಮೇಲೆ ಓದಲಾದ ಕ್ರಮಾಂಕ (1) ರಲ್ಲಿನ ಆದೇಶಾನುಸಾರ ಕಲ್ಲಘಟಗಿ, ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗೆ ಒಟ್ಟು 5 ಹುದ್ದೆಗಳನ್ನು ಸೃಜಿಸಲಾಗಿತ್ತು. ಮೇಲೆ ಓದಲಾದ ಕ್ರಮಾಂಕ (2) ರಲ್ಲಿ ಅಧಿಸೂಚನೆಯಲ್ಲಿ ಶಿಗ್ಗಾವಿ ಮತ್ತು ಕಲ್ಲಘಟಗಿ ತಾಲ್ಲೂಕು ಕೇಂದ್ರಗಳನ್ನು ಒಳಗೊಂಡ ಮಾರುಕಟ್ಟೆ ಕ್ಷೇತ್ರಕ್ಕೆ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ ಕಲ್ಲಘಟಗಿ ಎಂದು ಹೆಸರಿಸಲಾಗಿದೆ. ತದನಂತರ, ಸದರಿ ಹುದ್ದೆಗಳನ್ನು ವಿವಿಧ ಆದೇಶಗಳ ಮೂಲಕ ಕಾಲಕಾಲಕ್ಕೆ ತಾತ್ಕಾಲಿಕವಾಗಿ ಮುಂದುವರೆಸಲಾಗಿತ್ತು. ಮೇಲೆ ಓದಲಾದ (3) ರಲ್ಲಿನ ದಿನಾಂಕ:30/06/2004 ರ ಆದೇಶದಲ್ಲಿ ಸದರಿ ಹುದ್ದೆಗಳ ಅವಧಿಯನ್ನು ದಿನಾಂಕ:19/06/2005 ರವರೆಗೆ ವಿಸ್ತರಿಸಿ ಮಂಜೂರಾತಿ ನೀಡಲಾಗಿತ್ತು. ಸದರಿ ಹುದ್ದೆಗಳನ್ನು ದಿನಾಂಕ:20/06/2005 ರಿಂದ ಖಾಯಂಗೊಳಿಸಲು ಅಥವಾ ಖಾಯಂಗೊಳಿಸುವ ಪ್ರಕ್ರಿಯೆ ವಿಳಂಬವಾದಲ್ಲಿ ಪುನ: 2 ವರ್ಷಗಳ ಅವಧಿಗೆ ಮುಂದುವರೆಸಲು ಕೃಷಿ ಮಾರಾಟ ಇಲಾಖೆಯ ಆಯುಕ್ತರು ಪ್ರಸ್ತಾಪಿಸಿರುತ್ತಾರೆ. ಈ ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿದೆ. ಆದ್ದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ:ಸಇ 273 ಮಾಇಸೇ 2005 ಬೆಂಗಳೂರು ದಿನಾಂಕ:15ನೇ ಮೇ 2006**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳಿಂದಾಗಿ, ಕಲ್ಲಘಟಗಿ, ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗೆ ಮಂಜೂರಾದ ಈ ಕೆಳಕಂಡ ಹುದ್ದೆಗಳನ್ನು ತಾತ್ಕಾಲಿಕವಾಗಿ ದಿನಾಂಕ:20/06/2005 ರಿಂದ 19/06/2006 ರವರೆವಿಗೆ ಮುಂದುವರಿಸಲು ಸರ್ಕಾರದ ಮಂಜೂರಾತಿ ನೀಡಲಾಗಿದೆ:–

| ಕ್ರ.ಸಂ. | ಹುದ್ದೆಗಳ ಪದನಾಮ | ಪ್ರಸ್ತುತ ವೇತನ ಶ್ರೇಣಿ | ಹುದ್ದೆಗಳ ಸಂಖ್ಯೆ |
|---|---|---|---|
| 1 | ಕಾರ್ಯದರ್ಶಿ | 5575–10620 | 1 |
| 2 | ಸಹಾಯಕ ಕಾರ್ಯದರ್ಶಿ | 3850–7050 | 1 |
| 3 | ಲೆಕ್ಕಿಗರು ದರ್ಜೆ–2 | 3850–7050 | 1 |
| 4 | ಆಂತರಿಕ ಲೆಕ್ಕಪರಿಶೋಧಕರು | 3850–7050 | 1 |
| 5 | ಬೆರಳಚ್ಚುಗಾರರು | 3000–5450 | 1 |
| | **ಒಟ್ಟು** | | 5 |

ಈ ಬಗ್ಗೆ ತಗಲುವ ವೆಚ್ಚವನ್ನು ಲೆಕ್ಕ ಶೀರ್ಷಿಕೆ ಸಂಖ್ಯೆ: "3475–ಇತರೆ ಸಾಮಾನ್ಯ ಆರ್ಥಿಕ ಸೇವೆಗಳು–107–ಮಾರುಕಟ್ಟೆ ಕ್ರಮಪಡಿಸುವಿಕೆ–02–ಮಾರುಕಟ್ಟೆ ಸಮಿತಿಗಳು (ಯೋಜನೇತರ)" ರ ಅಡಿಯಲ್ಲಿ ಭರಿಸುವುದು.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರ ಅನಧಿಕೃತ ಟಿಪ್ಪಣಿ ಸಂಖ್ಯೆ:ಸಇ 40 ಆಂಅಸ (ಎ) 06 ದಿನಾಂಕ:10/04/2006 ಮತ್ತು ಸರ್ಕಾರದ ಆದೇಶ ಸಂಖ್ಯೆ:ಎಫ್‌ಡಿ/01/ಟಿಎಫ್‌ಟಿ/96 ದಿನಾಂಕ:10/07/1996 ರಲ್ಲಿ ಇಲಾಖಾ ಕಾರ್ಯದರ್ಶಿಗಳಿಗೆ ಆರ್ಥಿಕ ಇಲಾಖೆಗೆ ನೀಡಲಾಗಿರುವ ಆರ್ಥಿಕ ಪ್ರತ್ಯಾಧಿಕಾರದ ಮೇರೆಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 923

**ಬಿ.ಎಸ್.ಜಾಪಾಲಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಸಹಕಾರ ಇಲಾಖೆ

**ವಿಷಯ:** ಲಿಂಗಸಗೂರು, ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗೆ ಮಂಜೂರಾದ ಹುದ್ದೆಗಳನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರದ ಆದೇಶ ಸಂಖ್ಯೆ:ಸಿಎಂಡಬ್ಲ್ಯೂ/86/ಎಂಎಂಡಿ/90 ದಿನಾಂಕ:23/09/1993
2) ಸರ್ಕಾರದ ಆದೇಶ ಸಂಖ್ಯೆ:ಸಇ/228/ಮಾಇಸೇ/2003 ದಿನಾಂಕ:05/06/2004
3) ಆಯುಕ್ತರು, ಕೃಷಿ ಮಾರಾಟ ಇಲಾಖೆ, ಬೆಂಗಳೂರುರವರ ಪತ್ರ ಸಂಖ್ಯೆ: ಕೃಮಾಇ/ 39/ ಸಿಬ್ಬಂದಿ-1(ಸಿ)04 ದಿನಾಂಕ:12/01/2005
4) ಸರ್ಕಾರದ ಆದೇಶ ಸಂಖ್ಯೆ:ಸಇ/238/ಮಾಇಸೇ/2004 ದಿನಾಂಕ:31/03/2005

**ಪ್ರಸ್ತಾವನೆ:**

ಕೃಷಿ ಮಾರಾಟ ಇಲಾಖೆಯ ಆಯುಕ್ತರು ದಿನಾಂಕ:12/01/2005 ರ ಪ್ರಸ್ತಾವನೆಯಲ್ಲಿ ಮೇಲೆ ಓದಲಾದ ಕ್ರಮಾಂಕ (1) ರಲ್ಲಿನ ಆದೇಶಾನುಸಾರ ಲಿಂಗಸಗೂರು, ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗೆ ಒಟ್ಟು 8 ಹುದ್ದೆಗಳನ್ನು ಸೃಷ್ಟಿಸಿ ಸರ್ಕಾರದ ಮಂಜೂರಾತಿ ನೀಡಲಾಗಿತ್ತು. ತದನಂತರ, ಸದರಿ ಹುದ್ದೆಗಳನ್ನು ವಿವಿಧ ಆದೇಶಗಳ ಮೂಲಕ ಕಾಲಕಾಲಕ್ಕೆ ತಾತ್ಕಾಲಿಕವಾಗಿ ಮುಂದುವರೆಸಲಾಗಿತ್ತು. ಮೇಲೆ ಓದಲಾದ (2) ರಲ್ಲಿನ ದಿನಾಂಕ:05/06/2004 ರ ಆದೇಶದಲ್ಲಿ ಸದರಿ ಹುದ್ದೆಗಳ ಅವಧಿಯನ್ನು ದಿನಾಂಕ:31/10/2004 ರವರೆಗೆ ವಿಸ್ತರಿಸಿ ಮಂಜೂರಾತಿ ನೀಡಲಾಗಿತ್ತು. ಸದರಿ ಹುದ್ದೆಗಳನ್ನು ದಿನಾಂಕ:01/11/2004 ರಿಂದ ಖಾಯಂಗೊಳಿಸಲು ಅಥವಾ ಖಾಯಂಗೊಳಿಸುವ ಪ್ರಕ್ರಿಯೆ ವಿಳಂಬವಾದಲ್ಲಿ ಪುನ: 2 ವರ್ಷಗಳ ಅವಧಿಗೆ ಮುಂದುವರೆಸಲು ಕೃಷಿ ಮಾರಾಟ ಇಲಾಖೆಯ ಆಯುಕ್ತರು ಪ್ರಸ್ತಾಪಿಸಿರುತ್ತಾರೆ. ಮೇಲೆ ಓದಲಾದ ಕ್ರಮಾಂಕ (4) ರಲ್ಲಿನ ಸರ್ಕಾರಿ ಆದೇಶದಲ್ಲಿ ಸದರಿ ಹುದ್ದೆಗಳನ್ನು ದಿನಾಂಕ:01/11/2004 ರಿಂದ 31/10/2005 ರವರೆಗೆ ಮುಂದುವರೆಸಲಾಗಿದೆ. ಆದ್ದರಿಂದ, ದಿನಾಂಕ:01/11/2005 ರಿಂದ ಸದರಿ ಹುದ್ದೆಗಳನ್ನು ಮುಂದುವರೆಸಲು ಸರ್ಕಾರವು ಪರಿಶೀಲಿಸಿದೆ. ಆದ್ದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ:ಸಇ 274 ಮಾಇಸೇ 2005 ಬೆಂಗಳೂರು ದಿನಾಂಕ:16ನೇ ಮೇ 2006**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳಿಂದಾಗಿ, ಲಿಂಗಸಗೂರು, ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗೆ ಮಂಜೂರಾದ ಈ ಕೆಳಕಂಡ ಹುದ್ದೆಗಳನ್ನು ತಾತ್ಕಾಲಿಕವಾಗಿ ದಿನಾಂಕ:01/11/2005 ರಿಂದ 31/10/2006 ರವರೆವಿಗೆ ಮುಂದುವರಿಸಲು ಸರ್ಕಾರದ ಮಂಜೂರಾತಿ ನೀಡಲಾಗಿದೆ:-

| ಕ್ರ.ಸಂ. | ಹುದ್ದೆಗಳ ಪದನಾಮ | ವೇತನ ಶ್ರೇಣಿ | ಹುದ್ದೆಗಳ ಸಂಖ್ಯೆ |
|---|---|---|---|
| | **ಮಾರುಕಟ್ಟೆ ಇಲಾಖೆ ಸೇವೆ** | | |
| 1 | ಕಾರ್ಯದರ್ಶಿ | 1400-2750 | 1 |
| 2 | ಲೆಕ್ಕಿಗರು | 1190-2200 | 1 |
| | **ಮಾರುಕಟ್ಟೆ ಸಮಿತಿ ಸೇವೆ** | | |
| 1 | ದ್ವಿತೀಯ ದರ್ಜೆ ಸಹಾಯಕರು | 960-1760 | 2 |
| 2 | ಬೆರಳಚ್ಚುಗಾರರು | 960-1760 | 1 |
| 3 | ಮಾರುಕಟ್ಟೆ ಮೇಲ್ವಿಚಾರಕರು ದರ್ಜೆ-3 | 960-1760 | 3 |
| | **ಒಟ್ಟು** | | 8 |

ಈ ಬಗ್ಗೆ ತಗಲುವ ವೆಚ್ಚವನ್ನು ಲೆಕ್ಕ ಶೀರ್ಷಿಕೆ ಸಂಖ್ಯೆ:"3475-ಇತರೆ ಸಾಮಾನ್ಯ ಆರ್ಥಿಕ ಸೇವೆಗಳು-107-ಮಾರುಕಟ್ಟೆ ಕ್ರಮಪಡಿಸುವಿಕೆ-02-ಮಾರುಕಟ್ಟೆ ಸಮಿತಿಗಳು (ಯೋಜನೇತರ)" ರ ಅಡಿಯಲ್ಲಿ ಭರಿಸುವುದು.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರ ಅನಧಿಕೃತ ಟಿಪ್ಪಣಿ ಸಂಖ್ಯೆ:ಸಇ31/ಆಂಅಸ(ಎ)/05 ದಿನಾಂಕ:10/04/2006 ಮತ್ತು ಸರ್ಕಾರದ ಆದೇಶ ಸಂಖ್ಯೆ:ಎಫ್‌ಡಿ/01/ಟಿಎಫ್‌ಟಿ/96 ದಿನಾಂಕ:10/07/1996 ರಲ್ಲಿ ಇಲಾಖಾ ಕಾರ್ಯದರ್ಶಿಗಳಿಗೆ ಆರ್ಥಿಕ ಇಲಾಖೆಗೆ ನೀಡಲಾಗಿರುವ ಆರ್ಥಿಕ ಪ್ರತ್ಯಾಧಿಕಾರದ ಮೇರೆಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 924

**ಬಿ.ಎಸ್.ಜಾಪಾಲಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಸಹಕಾರ ಇಲಾಖೆ

## ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಸಚಿವಾಲಯ

**ವಿಷಯ:** ಶ್ರೀಮತಿ ಡಿ. ನಿರ್ಮಲ, ಉಪನಿರ್ದೇಶಕರು (ನಿ), ಆಹಾರ ಮತ್ತು ನಾಗರೀಕ ಸರಬರಾಜು ಇಲಾಖೆ, ಉತ್ತರ ಕನ್ನಡ ಜಿಲ್ಲೆ ಹಾಗೂ ಶ್ರೀ ಎಸ್.ಎಸ್. ಕೊಳಂಬಕರ್ ಲೆಕ್ಕಾಧೀಕ್ಷಕರು (ನಿವೃತ್ತ) ಆಹಾರ ಮತ್ತು ನಾಗರೀಕ ಸರಬರಾಜು ಇಲಾಖೆ, ಉತ್ತರ ಕನ್ನಡ ಜಿಲ್ಲೆ ಇವರುಗಳ ವಿರುದ್ಧ ಇಲಾಖಾ ವಿಚಾರಣೆ ನಡೆಸುವ ಬಗ್ಗೆ.

**ಓದಲಾಗಿದೆ:** 1. ಆಯುಕ್ತರ ಪತ್ರ ಸಂಖ್ಯೆ: ಸಿಎಫ್ಎಸ್:ಇಎಸ್‌ಟಿ(2) 34:03-04, ದಿನಾಂಕ:27.12.2004.

2. ಸರ್ಕಾರದ ತಿಳುವಳಿಕೆ ಪತ್ರಸಂಖ್ಯೆ: ಆನಾಸ 91 ಆಇಸೇ 2004, ದಿನಾಂಕ:01.02.2006.

3. ಸರ್ಕಾರದ ಆದೇಶ ಸಂಖ್ಯೆ: ಆನಾಸ 91 ಆಇಸೇ 2004, ದಿನಾಂಕ:01.02.2006.

4. ಶ್ರೀ ಎಸ್.ಎಸ್. ಕೊಳಂಬಕರ್, ಲೆಕ್ಕಾಧೀಕ್ಷಕರು (ನಿ) ಇವರ ಲಿಖಿತ ಉತ್ತರ ದಿನಾಂಕ:17.02.2006.

5. ಶ್ರೀಮತಿ ಡಿ. ನಿರ್ಮಲ, ಉಪನಿರ್ದೇಶಕರು (ನಿ) ಇವರ ಲಿಖಿತ ಉತ್ತರ ದಿನಾಂಕ:12.05.2006.

**ಪ್ರಸ್ತಾವನೆ:**

ಆಹಾರ ಮತ್ತು ನಾಗರೀಕ ಸರಬರಾಜು ಇಲಾಖೆಯ ಆಯುಕ್ತರು ಮೇಲೆ (1)ರಲ್ಲಿ ಓದಲಾದ ಅವರ ಪತ್ರದಲ್ಲಿ ಶ್ರೀಮತಿ ಡಿ.ನಿರ್ಮಲ, ಉಪನಿರ್ದೇಶಕರು (ನಿವೃತ್ತ) ಆಹಾರ ಮತ್ತು ನಾಗರೀಕ ಸರಬರಾಜು ಇಲಾಖೆ, ಉತ್ತರ ಕನ್ನಡ ಜಿಲ್ಲೆ ಹಾಗೂ ಶ್ರೀ ಎಸ್.ಎಸ್. ಕೊಳಂಬಕರ್, ಲೆಕ್ಕಾಧೀಕ್ಷಕರು, ಶ್ರೀ ಕೃಷ್ಣಾ ಎಸ್. ನಾಯಕ್, ದ್ವಿ.ದ.ಸ. ರೊಂದಿಗೆ ಷಾಮೀಲಾಗಿ ನ್ಯಾಯಬೆಲೆ ಅಂಗಡಿಗಳಲ್ಲಿ ಪೊಲೀಸರಿಗೆ ಉಚಿತವಾಗಿ ಆಹಾರ ಧಾನ್ಯ ವಿತರಿಸುವ ಬಿಲ್ಲುಗಳನ್ನು ಮತ್ತು ಮಧ್ಯಾಹ್ನ ಉಪಹಾರ ಯೋಜನೆಯ ಬಿಲ್ಲುಗಳನ್ನು ಪರಿಶೀಲಿಸಲು ಮತ್ತು ಬಿಲ್ಲುಗಳ ಪಾವತಿ ಕಾರ್ಯ ನಿರ್ವಹಿಸುವ ಕಾರ್ಯವನ್ನು ವಹಿಸಿಕೊಟ್ಟು ಉಪನಿರ್ದೇಶಕರ ಸಹಿಯಲ್ಲಿಯೇ 17 ಚೆಕ್ಕುಗಳ ಮುಖಾಂತರ ರೂ.17,68,750/- ಗಳ ಹಣ ದುರುಪಯೋಗಕ್ಕೆ ಕಾರಣರಾಗಿರುವುದರಿಂದ, ಇವರ ಮೇಲೆ ಶಿಸ್ತು ಕ್ರಮ ಕೈಗೊಳ್ಳುವಂತೆ ಕೋರಿರುತ್ತಾರೆ.

ಮೇಲೆ (2)ರಲ್ಲಿ ಓದಲಾದ ಸರ್ಕಾರದ ಪತ್ರದನ್ವಯ ಶ್ರೀಮತಿ ಡಿ.ನಿರ್ಮಲ, ಉಪನಿರ್ದೇಶಕರು (ನಿ), ಆಹಾರ ಮತ್ತು ನಾಗರೀಕ ಸರಬರಾಜು ಇಲಾಖೆ, ಉತ್ತರ ಕನ್ನಡ ಜಿಲ್ಲೆ ಹಾಗೂ ಶ್ರೀ ಎಸ್.ಎಸ್. ಕೊಳಂಬಕರ್, ಲೆಕ್ಕಾಧೀಕ್ಷಕರು (ನಿವೃತ್ತ) ಆಹಾರ ಮತ್ತು ನಾಗರೀಕ ಸರಬರಾಜು ಇಲಾಖೆ, ಉತ್ತರ ಕನ್ನಡ ಜಿಲ್ಲೆ ಇವರುಗಳಿಗೆ ತಿಳುವಳಿಕೆ ಪತ್ರಗಳನ್ನು ಜಾರಿ ಮಾಡಿ ಅವರಿಂದ ಸಮಜಾಯಿಷಿ ನೀಡಲು ಕೋರಲಾಗಿತ್ತು.

ಮೇಲೆ (3)ರಲ್ಲಿ ಓದಲಾದ ಆದೇಶದಲ್ಲಿ ಶ್ರೀಮತಿ ಡಿ. ನಿರ್ಮಲ ಹಾಗೂ ಶ್ರೀ ಎಸ್.ಎಸ್. ಕೊಳಂಬಕರ್ ಇವರುಗಳು ನಿವೃತ್ತಿ ಹೊಂದಿರುವುದರಿಂದ, ಅವರ ಮೇಲೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 214ರಡಿ ಶಿಸ್ತು ಕ್ರಮ ಜರುಗಿಸಲು ಅನುವಾಗುವಂತೆ ಇಲಾಖಾ ವಿಚಾರಣೆ ಪ್ರಕ್ರಿಯೆ ನಡೆಸಲು ಮತ್ತು ಕರ್ನಾಟಕ ನಾಗರೀಕ ಸೇವೆಗಳು (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮ 1957ರ ನಿಯಮ 11ರಲ್ಲಿ ನಿಗದಿಪಡಿಸಿರುವ ಕಾರ್ಯವಿಧಾನವನ್ನು ಈ ಶಿಸ್ತುಕ್ರಮದಲ್ಲಿ ಅನುಸರಿಸಲು ಆದೇಶಿಸಲಾಗಿತ್ತು.

ಮೇಲೆ (4)ರಲ್ಲಿ ಓದಲಾದ ಶ್ರೀ ಎಸ್.ಎಸ್. ಕೊಳಂಬಕರ್‌ರವರ ಹೇಳಿಕೆಯಲ್ಲಿ ಅವರ ಮೇಲೆ ಮಾಡಿರುವ ಆಪಾದನೆಗಳನ್ನು ಒಪ್ಪಿಕೊಳ್ಳದೆ ಇದಕ್ಕೆ ಅವರೊಬ್ಬರೇ ನೇರವಾಗಿ ಹೊಣೆಗಾರರಾಗಿರುವುದಿಲ್ಲ. ಅಲ್ಲದೆ ಆ ಚೆಕ್ಕುಗಳು ಅವರ ಬಳಿ ಇರಲಿಲ್ಲ. ಜಾಬ್ ಚಾರ್ಟ್‌ನಲ್ಲಿ ಇವುಗಳನ್ನು ಅವರು ಪರಿಶೀಲಿಸಬೇಕೆಂಬ ಬಗ್ಗೆ ಹೇಳಿರುವುದಿಲ್ಲವೆಂದೂ, ಈ ಚೆಕ್ಕುಗಳು ಆರ್ಥಿಕ ಸಂಹಿತೆಯ ಪ್ರಕಾರ ಉಪನಿರ್ದೇಶಕರ ತಾಬಾದಲ್ಲಿ ಇರಬೇಕಾಗಿರುವುದರಿಂದ, ಇದಕ್ಕೆ ಅವರು ಜವಾಬ್ದಾರರಾಗಿಲ್ಲವೆಂದು ತಿಳಿಸಿ ಪ್ರಾಮಾಣಿಕತೆ ಹಾಗೂ ದಕ್ಷತೆಯಿಂದ ಕರ್ತವ್ಯ ನಿರ್ವಹಿಸಿರುವುದಾಗಿ ತಿಳಿಸಿ ಇವರ ವಿರುದ್ಧ ಮಾಡಲಾದ ಆರೋಪಗಳು ನೈಸರ್ಗಿಕ ನ್ಯಾಯಕ್ಕೆ (natural justice) ವಿರುದ್ಧವಾಗಿರುತ್ತದೆ ಎಂದು ತಿಳಿಸಿದ್ದಾರೆ.

ಮೇಲೆ (5)ರಲ್ಲಿ ಓದಲಾದ ಶ್ರೀಮತಿ ಡಿ. ನಿರ್ಮಲ, ಉಪನಿರ್ದೇಶಕರು (ನಿ) ಆಹಾರ ಮತ್ತು ನಾಗರೀಕ ಸರಬರಾಜು ಇಲಾಖೆ ಅವರ ಹೇಳಿಕೆಯಲ್ಲಿ ಅವರ ಮೇಲೆ ಮಾಡಿರುವ ಎಲ್ಲಾ ಆರೋಪಗಳನ್ನು ಅಲ್ಲಗಳೆದು ನಿಯಮಾನುಸಾರ ಅವರ ಮೇಲೆ ಯಾವುದೇ ಇಲಾಖಾ ವಿಚಾರಣೆಯನ್ನು ನಡೆಸಲು ನಿಯಮಾವಳಿಗಳಲ್ಲಿ ಅವಕಾಶವಿರುವುದಿಲ್ಲವೆಂದು ಕೆ.ಸಿ.ಎಸ್. (ಸಿಸಿಎ) ನಿಯಮಾವಳಿ 1957ರ ನಿಯಮ 8ನ್ನು ಉಲ್ಲೇಖಿಸಿರುತ್ತಾರೆ. ಅಲ್ಲದೆ ಇವರ ಮೇಲೆ ಮಾಡಿರುವ ಆಪಾದನೆಗಳ ಬಗ್ಗೆ ಘಟನೆ ನಡೆದು 4 ವರ್ಷಗಳಾಗಿರುವುದರಿಂದ, ಇವರ ಮೇಲೆ ನಿಯಮಾನುಸಾರ ಕ್ರಮಕ್ಕಾಗಿ ಅವಕಾಶವಿರುವುದಿಲ್ಲವೆಂದು ತಿಳಿಸಿರುತ್ತಾರೆ. ಅವರ ಮೇಲೆ ಮಾಡಿರುವ ಆಪಾದನೆಗಳನ್ನು ತಳ್ಳಿಹಾಕಿ ಅವರಿಗೆ ಪಿಂಚಣಿ ಸೌಲಭ್ಯಗಳನ್ನು ಜಾರಿಮಾಡಬೇಕೆಂದು ಸಹ ಕೋರಿ ಈ ವಿಚಾರಣೆಯನ್ನು ಕೈಬಿಡಬೇಕೆಂದು ಕೋರಿರುತ್ತಾರೆ.

ಈ ಘಟನೆ ನಡೆದು ಇನ್ನೂ ನಾಲ್ಕು ವರ್ಷಗಳಾಗಿಲ್ಲದಿರುವುದರಿಂದ ಹಾಗೂ ಪ್ರಸ್ತಾಪಿಸಲಾಗಿರುವ 17 ಚೆಕ್ಕುಗಳ ದುರ್ಬಳಕೆ ಬಗ್ಗೆ 2003ರಲ್ಲಿ ಉಪನಿರ್ದೇಶಕರು ವರದಿ ಮಾಡಿರುವುದರಿಂದ, ಇವರುಗಳ ಹೇಳಿಕೆಗಳನ್ನು ಒಪ್ಪಿಕೊಳ್ಳದೆ ಇವರುಗಳಿಂದ ಸರ್ಕಾರಕ್ಕೆ ನಷ್ಟವಾಗಿರುವುದನ್ನು ಮನಗಂಡು ಈ ಪ್ರಕರಣದ ಬಗ್ಗೆ ಸತ್ಯಾಸತ್ಯತೆಗಳನ್ನು ತಿಳಿಯಲು ಇವರಿಬ್ಬರ ಮೇಲೆ ಇಲಾಖಾ ವಿಚಾರಣೆ ನಡೆಸಲು ಉದ್ದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆನಾಸ 91 ಆಇಸೇ 2004, ಬೆಂಗಳೂರು, ದಿನಾಂಕ:27ನೇ ಜುಲೈ, 2006**

ಶ್ರೀಮತಿ ಡಿ.ನಿರ್ಮಲ, ಉಪನಿರ್ದೇಶಕರು (ನಿವೃತ್ತ) ಆಹಾರ ಮತ್ತು ನಾಗರೀಕ ಸರಬರಾಜು ಇಲಾಖೆ, ಉತ್ತರ ಕನ್ನಡ ಜಿಲ್ಲೆ, ಕಾರವಾರ ಹಾಗೂ ಶ್ರೀ ಎಸ್.ಎಸ್. ಕೊಳಂಬಕರ್, ಲೆಕ್ಕಾಧೀಕ್ಷಕರು (ನಿ) ಆಹಾರ ಮತ್ತು ನಾಗರೀಕ ಸರಬರಾಜು ಇಲಾಖೆ, ಉತ್ತರ ಕನ್ನಡ ಜಿಲ್ಲೆ, ಕಾರವಾರ ಇವರುಗಳ ಮೇಲಿನ ಆಪಾದನೆಗಳ ಬಗ್ಗೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ 1957ರ ನಿಯಮ 11 ಮತ್ತು ಕೆ.ಸಿ.ಎಸ್.ಆರ್. ನಿಯಮ 214ರ ಮೇರೆಗೆ ಶ್ರೀ ಕೆ. ಈಶ್ವರಭಟ್, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು, ಜ್ಯೂಡಿಷಿಯಲ್ ಲೇಔಟ್, ಬೆಂಗಳೂರು ಇವರನ್ನು ವಿಚಾರಣಾಧಿಕಾರಿಯನ್ನಾಗಿಯೂ ಮತ್ತು ಉಪನಿಯಮ 5(ಸಿ)ಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶಿಸ್ತು ಪ್ರಾಧಿಕಾರಿಯ ಪರವಾಗಿ ವಿಷಯವನ್ನು ಮಂಡಿಸಲು ಉಪನಿರ್ದೇಶಕರು, ಆಹಾರ ಮತ್ತು ನಾಗರೀಕ ಸರಬರಾಜು ಇಲಾಖೆ, ದಕ್ಷಿಣ ವಲಯ, ಬೆಂಗಳೂರು ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಕ ಮಾಡಿದೆ. ಈ ಪ್ರಕರಣದ ವಿಚಾರಣೆಗಾಗಿ ವಿಚಾರಣಾಧಿಕಾರಿಗಳಿಗೆ ರೂ.5,000 (ಐದು ಸಾವಿರ ರೂಪಾಯಿಗಳು ಮಾತ್ರ) ಸಂಚಿತ ಸಂಭಾವನೆಯನ್ನು ಹಾಗೂ ದಿನಾಂಕ:04.03.2002ರ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 45 ಸೇಇವಿ 2001ರನ್ವಯ ರೂ.1,000/- (ಒಂದು ಸಾವಿರ ರೂಪಾಯಿಗಳು ಮಾತ್ರ) ವಾಹನ ಭತ್ಯೆವನ್ನು ವಿಚಾರಣಾಧಿಕಾರಿಗಳು ವಿಚಾರಣಾ ವರದಿಯನ್ನು ಸಲ್ಲಿಸಿದ ನಂತರ ಆಯುಕ್ತರು, ಆಹಾರ ಮತ್ತು ನಾಗರೀಕ ಸರಬರಾಜು ಇಲಾಖೆ ಇವರು ಪಾವತಿ ಮಾಡತಕ್ಕದ್ದು.

ವಿಚಾರಣಾಧಿಕಾರಿಯು ವಿಚಾರಣೆಯನ್ನು 3 ತಿಂಗಳೊಳಗಾಗಿ ಮುಗಿಸಿ ಸೂಕ್ತ ದಾಖಲಾತಿಗಳೊಡನೆ ಸರ್ಕಾರಕ್ಕೆ ವಿಚಾರಣಾ ವರದಿಯನ್ನು ಸಲ್ಲಿಸುವಂತೆ ನಿರ್ದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಎಸ್. ವಿಶ್ವೇಶ್ವರಯ್ಯ**

ಪೀಠಾಧಿಕಾರಿ, ಆಹಾರ-1 ಶಾಖೆ,

ಆಹಾರ, ನಾಗರೀಕ ಸರಬರಾಜು ಮತ್ತು

ಗ್ರಾಹಕರ ವ್ಯವಹಾರಗಳ ಇಲಾಖೆ.

ಪಿ.ಆರ್. 1180

## ವಸತಿ ಸಚಿವಾಲಯ

**ವಿಷಯ:** ಚಿತ್ರದುರ್ಗ ಜಿಲ್ಲೆ, ಹೊಳಲ್ಕೆರೆ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ.

**ಉಲ್ಲೇಖ:** ಸರ್ಕಾರದ ಆದೇಶ ಸಂಖ್ಯೆ: ವಇ/ 42/ ಹೆಚ್‌ಎಎಂ/ 1998, ದಿನಾಂಕ:10.04.2000.

**ಪ್ರಸ್ತಾವನೆ:**

ಸರ್ಕಾರವು ನಗರ ಆಶ್ರಯ ಸಮಿತಿಗಳನ್ನು ಉಲ್ಲೇಖಿತ ಆದೇಶದನ್ವಯ ವಿಧಾನಸಭಾ ಕ್ಷೇತ್ರವಾರು ಪುನರ್ ರಚಿಸಲು ತೀರ್ಮಾನಿಸಿದ್ದು, ಚಿತ್ರದುರ್ಗ ಜಿಲ್ಲೆ, ಹೊಳಲ್ಕೆರೆ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ ಪರಿಶೀಲಿಸಿ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ವಇ 83/ ಹೆಚ್‌ಎಎಸ್ 2006, ಬೆಂಗಳೂರು, ದಿನಾಂಕ:24ನೇ ಜುಲೈ, 2006**

ಮೇಲ್ಕಂಡ ಸಂದರ್ಭದಲ್ಲಿ ಚಿತ್ರದುರ್ಗ ಜಿಲ್ಲೆ, ಹೊಳಲ್ಕೆರೆ ನಗರ ಆಶ್ರಯ ಸಮಿತಿಗೆ ಈ ಕೆಳಕಂಡವರನ್ನು ಅಧಿಕಾರೇತರ ಸದಸ್ಯರನ್ನಾಗಿ ನೇಮಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಆಶ್ರಯ ಸಮಿತಿಯನ್ನು ಪುನರ್‌ರಚಿಸಲಾಗಿದೆ.

1. ಶ್ರೀ ಡಿ.ಎನ್. ಮುರಳೀಧರ, ಬಿನ್ ವೆಂಕಟೇಶ್ವರ ರಾವ್, ಹೊಳಲ್ಕೆರೆ ಟೌನ್, ಹೊಳಲ್ಕೆರೆ ತಾಲ್ಲೂಕು, ಚಿತ್ರದುರ್ಗ. ಸದಸ್ಯರು
2. ಶ್ರೀಮತಿ ವಿಜಯಮ್ಮ ಬಿ.ಎಸ್. ವೇದಮೂರ್ತಿ, ಗೋಪಾಲಸ್ವಾಮಿ ರಸ್ತೆ, ಹೊಳಲ್ಕೆರೆ ಟೌನ್, ಹೊಳಲ್ಕೆರೆ ತಾಲ್ಲೂಕು, ಚಿತ್ರದುರ್ಗ ಜಿಲ್ಲೆ. ಸದಸ್ಯರು
3. ಶ್ರೀ ಖಾದರ್ ಭಾಷ, ಬಿನ್ ಸಯ್ಯಾದ್ ಬಕೀನ್, ಹೊಳಲ್ಕೆರೆ, ಹೊಳಲ್ಕೆರೆ ತಾಲ್ಲೂಕು, ಚಿತ್ರದುರ್ಗ ಜಿಲ್ಲೆ. ಸದಸ್ಯರು
4. ಶ್ರೀ ಎಂ.ಎನ್. ಚಂದ್ರಕಾಂತ್ ಬಿನ್ ಮೋಹನ್ ಹೊಳಲ್ಕೆರೆ, ಹೊಳಲ್ಕೆರೆ ತಾಲ್ಲೂಕು, ಚಿತ್ರದುರ್ಗ ಜಿಲ್ಲೆ. ಸದಸ್ಯರು

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1181

**ಎಸ್. ಇಂದುಮತಿ**

ಪೀಠಾಧಿಕಾರಿ-2, ವಸತಿ ಇಲಾಖೆ.

**ವಿಷಯ:** ರಾಯಚೂರು ಜಿಲ್ಲೆ, ಲಿಂಗಸಗೂರು ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ.

**ಉಲ್ಲೇಖ:** ಸರ್ಕಾರದ ಆದೇಶ ಸಂಖ್ಯೆ: ವಇ/ 42/ ಹೆಚ್‌ಎಎಂ/ 1998, ದಿನಾಂಕ:10.04.2000.

**ಪ್ರಸ್ತಾವನೆ:**

ಸರ್ಕಾರವು ನಗರ ಆಶ್ರಯ ಸಮಿತಿಗಳನ್ನು ಉಲ್ಲೇಖಿತ ಆದೇಶದನ್ವಯ ವಿಧಾನಸಭಾ ಕ್ಷೇತ್ರವಾರು ಪುನರ್ ರಚಿಸಲು ತೀರ್ಮಾನಿಸಿದ್ದು, ರಾಯಚೂರು ಜಿಲ್ಲೆ, ಲಿಂಗಸಗೂರು ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ ಪರಿಶೀಲಿಸಿ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ವಇ/ 75/ ಹೆಚ್‌ಎಎಂ 2006, ಬೆಂಗಳೂರು, ದಿನಾಂಕ:22ನೇ ಜುಲೈ, 2006**

ಮೇಲ್ಕಂಡ ಸಂದರ್ಭದಲ್ಲಿ ರಾಯಚೂರು ಜಿಲ್ಲೆ, ಲಿಂಗಸಗೂರು ನಗರ ಆಶ್ರಯ ಸಮಿತಿಗೆ ಈ ಕೆಳಕಂಡವರನ್ನು ಅಧಿಕಾರೇತರ ಸದಸ್ಯರನ್ನಾಗಿ ನೇಮಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಆಶ್ರಯ ಸಮಿತಿಯನ್ನು ಪುನರ್‌ರಚಿಸಲಾಗಿದೆ.

1. ಶ್ರೀ ರುಕ್ಮದ್ದೀನ್ ತಂದೆ ಶರ್ಪುದ್ದೀನ್ ಡಕ್ನಿ, ಲಿಂಗಸಗೂರು ತಾಲ್ಲೂಕು, ರಾಯಚೂರು ಜಿಲ್ಲೆ. ಸದಸ್ಯರು
2. ಶ್ರೀ ಚನ್ನಪ್ಪಗೌಡ ತಂದೆ ಸಿದ್ರಾಮಪ್ಪಗೌಡ ಕರಡಕಲ್, ಲಿಂಗಸಗೂರು ತಾಲ್ಲೂಕು, ರಾಯಚೂರು ಜಿಲ್ಲೆ. ಸದಸ್ಯರು
3. ಶ್ರೀ ಮಲ್ಲಪ್ಪ ತಂದೆ ಅಮರಪ್ಪ ಕವಿತಾಳ ಸಾ: ಕರಡಕಲ್, ಲಿಂಗಸಗೂರು ತಾಲ್ಲೂಕು, ರಾಯಚೂರು ಜಿಲ್ಲೆ. ಸದಸ್ಯರು
4. ಶ್ರೀಮತಿ ಅಂಬಮ್ಮ ಗಂಡ ಯಲ್ಲಪ್ಪ ಗೋರೆಬಾಳ, ಲಿಂಗಸಗೂರು ತಾಲ್ಲೂಕು, ರಾಯಚೂರು ಜಿಲ್ಲೆ. ಸದಸ್ಯರು

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1182

**ಎಸ್. ಇಂದುಮತಿ**

ಪೀಠಾಧಿಕಾರಿ-2, ವಸತಿ ಇಲಾಖೆ.

**ವಿಷಯ:** ಗುಲ್ಬರ್ಗಾ ಜಿಲ್ಲೆಯ ಶಹಬಾದ್ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ.

**ಉಲ್ಲೇಖ:** ಸರ್ಕಾರದ ಆದೇಶ ಸಂಖ್ಯೆ: ವಇ/ 42/ ಹೆಚ್‌ಎಎಂ/ 1998, ದಿನಾಂಕ:10.04.2000.

**ಪ್ರಸ್ತಾವನೆ:**

ಸರ್ಕಾರವು ನಗರ ಆಶ್ರಯ ಸಮಿತಿಗಳನ್ನು ಉಲ್ಲೇಖಿತ ಆದೇಶದನ್ವಯ ವಿಧಾನಸಭಾ ಕ್ಷೇತ್ರವಾರು ಪುನರ್ ರಚಿಸಲು ತೀರ್ಮಾನಿಸಿದ್ದು, ಗುಲ್ಬರ್ಗಾ ಜಿಲ್ಲೆ, ಶಹಬಾದ್ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ ಪರಿಶೀಲಿಸಿ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ವಇ/ 72/ ಹೆಚ್‌ಎಎಸ್ 2006, ಬೆಂಗಳೂರು, ದಿನಾಂಕ:28ನೇ ಜುಲೈ, 2006**

ಮೇಲ್ಕಂಡ ಸಂದರ್ಭದಲ್ಲಿ ಗುಲ್ಬರ್ಗಾ ಜಿಲ್ಲೆ, ಶಹಬಾದ್ ನಗರ ಆಶ್ರಯ ಸಮಿತಿಗೆ ಈ ಕೆಳಕಂಡವರನ್ನು ಅಧಿಕಾರೇತರ ಸದಸ್ಯರನ್ನಾಗಿ ನೇಮಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಆಶ್ರಯ ಸಮಿತಿಯನ್ನು ಪುನರ್‌ರಚಿಸಲಾಗಿದೆ.

1. ಶ್ರೀ ಮಲ್ಲು ಚಂದ್ರಕಾಂತ ಕುಂಬಾರ, ಶಹಬಾದ್, ಗುಲ್ಬರ್ಗಾ. ಸದಸ್ಯರು
2. ಶ್ರೀ ಅಶೋಕ ತಂದೆ: ಅಂಬಾದಾಸ್ ಜಿಂಗಾಡೆ, ಶಹಬಾದ್, ಗುಲ್ಬರ್ಗಾ. ಸದಸ್ಯರು
3. ಶ್ರೀಮತಿ ಶಾರದಾಬಾಯಿ, ಗಂಡ: ಗೋವಿಂದಸ್ವಾಮಿ ಚೌದ್ರಿ, ಶಹಬಾದ್, ಗುಲ್ಬರ್ಗಾ. ಸದಸ್ಯರು
4. ಶ್ರೀ ಸೈಯದ ಅಕ್ಬರ ಹುಸೇನಿ, ತಂದೆ: ಸೈಯದ ಅಹಮದ ಹುಸೇನಿ, ಶಹಬಾದ್, ಗುಲ್ಬರ್ಗಾ. ಸದಸ್ಯರು

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1183

**ಎಸ್. ಇಂದುಮತಿ**

ಪೀಠಾಧಿಕಾರಿ-2, ವಸತಿ ಇಲಾಖೆ.

**ವಿಷಯ:** ಮೈಸೂರು ಜಿಲ್ಲೆಯ ನಂಜನಗೂಡು ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ.

**ಉಲ್ಲೇಖ:** ಸರ್ಕಾರದ ಆದೇಶ ಸಂಖ್ಯೆ: ವಇ/ 42/ ಹೆಚ್‌ಎಎಂ/ 1998, ದಿನಾಂಕ:10.04.2000.

**ಪ್ರಸ್ತಾವನೆ:**

ಸರ್ಕಾರವು ನಗರ ಆಶ್ರಯ ಸಮಿತಿಗಳನ್ನು ಉಲ್ಲೇಖಿತ ಆದೇಶದನ್ವಯ ವಿಧಾನಸಭಾ ಕ್ಷೇತ್ರವಾರು ಪುನರ್ ರಚಿಸಲು ತೀರ್ಮಾನಿಸಿದ್ದು, ಮೈಸೂರು ಜಿಲ್ಲೆ, ನಂಜನಗೂಡು ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ ಪರಿಶೀಲಿಸಿ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ವಇ/ 15/ ಹೆಚ್‌ಎಎಸ್ 2006, ಬೆಂಗಳೂರು, ದಿನಾಂಕ:24ನೇ ಜುಲೈ, 2006**

ಮೇಲ್ಕಂಡ ಸಂದರ್ಭದಲ್ಲಿ ಮೈಸೂರು ಜಿಲ್ಲೆ, ನಂಜನಗೂಡು ನಗರ ಆಶ್ರಯ ಸಮಿತಿಗೆ ಈ ಕೆಳಕಂಡವರನ್ನು ಅಧಿಕಾರೇತರ ಸದಸ್ಯರನ್ನಾಗಿ ನೇಮಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಆಶ್ರಯ ಸಮಿತಿಯನ್ನು ಪುನರ್‌ರಚಿಸಲಾಗಿದೆ.

1. ಶ್ರೀ ಬಸವರಾಜು ಬಿನ್ ಚಿಕ್ಕಬಸವಯ್ಯ, 5ನೇ ಕ್ರಾಸ್, ಅಶೋಕಪುರಂ, ನಂಜನಗೂಡು ಟೌನ್, ಮೈಸೂರು ಜಿಲ್ಲೆ. ಸದಸ್ಯರು
2. ಶ್ರೀ ಎನ್.ಪಿ. ಕೃಷ್ಣ ಬಿನ್ ಪುಟ್ಟಮಾದಪ್ಪ, ಬೆಸ್ತರಬೀದಿ, ಚಾಮಲಾಪುರ, ನಂಜನಗೂಡು ಟೌನ್, ಮೈಸೂರು ಜಿಲ್ಲೆ. ಸದಸ್ಯರು
3. ಶ್ರೀಮತಿ ಅಲಿಮಾಬಿ ಕೋಂ ಡಾ: ಹೆಚ್.ಓ. ಶಫೀವುಲ್ಲಾ ಖಾನ್, ನಂ.2286, ಮುಸ್ಲಿಂ ಬ್ಲಾಕ್, ಅರೇಬಿಕ್ ಸ್ಕೂಲ್ ರಸ್ತೆ, ಚಾಮಲಾಪುರ ಮೊಹಲ್ಲಾ, ನಂಜನಗೂಡು ಟೌನ್, ಮೈಸೂರು ಜಿಲ್ಲೆ. ಸದಸ್ಯರು
4. ಶ್ರೀ ಎಸ್. ಕೃಷ್ಣಪ್ಪ ಬಿನ್ ಶ್ರೀಕಂಠಯ್ಯ, ನಾಗೇಶ್ವರ ಲೇಔಟ್, 17ನೇ ಕ್ರಾಸ್, ಶ್ರೀಕಂಠಪುರಿ ಬಡಾವಣೆ, ನಂಜನಗೂಡು ಟೌನ್, ಮೈಸೂರು ಜಿಲ್ಲೆ. ಸದಸ್ಯರು

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1184

**ಎಸ್. ಇಂದುಮತಿ**

ಪೀಠಾಧಿಕಾರಿ-2, ವಸತಿ ಇಲಾಖೆ.

**ವಿಷಯ:** ಉಡುಪಿ ಜಿಲ್ಲೆಯ ಉಡುಪಿ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ.

**ಉಲ್ಲೇಖ:** ಸರ್ಕಾರದ ಆದೇಶ ಸಂಖ್ಯೆ: ವಇ/ 42/ ಹೆಚ್‌ಎಎಂ/ 1998, ದಿನಾಂಕ:10.04.2000.

**ಪ್ರಸ್ತಾವನೆ:**

ಸರ್ಕಾರವು ನಗರ ಆಶ್ರಯ ಸಮಿತಿಗಳನ್ನು ಉಲ್ಲೇಖಿತ ಆದೇಶದನ್ವಯ ವಿಧಾನಸಭಾ ಕ್ಷೇತ್ರವಾರು ಪುನರ್ ರಚಿಸಲು ತೀರ್ಮಾನಿಸಿದ್ದು, ಉಡುಪಿ ಜಿಲ್ಲೆ, ಉಡುಪಿ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ ಪರಿಶೀಲಿಸಿ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ವಇ/ 61/ ಹೆಚ್‌ಎಎಸ್ 2006, ಬೆಂಗಳೂರು, ದಿನಾಂಕ:24ನೇ ಜುಲೈ, 2006**

ಮೇಲ್ಕಂಡ ಸಂದರ್ಭದಲ್ಲಿ ಉಡುಪಿ ಜಿಲ್ಲೆ, ಉಡುಪಿ ನಗರ ಆಶ್ರಯ ಸಮಿತಿಗೆ ಈ ಕೆಳಕಂಡವರನ್ನು ಅಧಿಕಾರೇತರ ಸದಸ್ಯರನ್ನಾಗಿ ನೇಮಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಆಶ್ರಯ ಸಮಿತಿಯನ್ನು ಪುನರ್‌ರಚಿಸಲಾಗಿದೆ.

1. ಶ್ರೀ ಮಂಜುನಾಥ, ನಾಗವೇಣಿ ನಿಲಯ, ಕಸ್ತೂರ್ಬಾನಗರ, ಚಿಟ್ಪಾಡಿ, ಉಡುಪಿ. ಸದಸ್ಯರು
2. ಶ್ರೀ ಪ್ರಭಾಕರ ಪೂಜಾರಿ, ಸುಪ್ರಭ, ದೊಡ್ಡಣಗುಡ್ಡೆ, ಕುಂಜಿಬೆಟ್ಟು, ಉಡುಪಿ. ಸದಸ್ಯರು
3. ಶ್ರೀ ಪಾಸ್ಕಲ್ ಮಸ್ಕರೇಂಜಸ್, ಪೆರಂಪಳ್ಳೀ, ಕುಂಜಿಬೆಟ್ಟು, ಉಡುಪಿ. ಸದಸ್ಯರು
4. ಶ್ರೀಮತಿ ವತ್ಸಲ ನಾಗೇಶ್, ರಾಜಗೋಪಾಲ ನಗರ, ಹೆರ್ಗ, ಉಡುಪಿ. ಸದಸ್ಯರು

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1185

**ಎಸ್. ಇಂದುಮತಿ**

ಪೀಠಾಧಿಕಾರಿ-2, ವಸತಿ ಇಲಾಖೆ.

## ಶಿಕ್ಷಣ ಸಚಿವಾಲಯ

**ವಿಷಯ:** ಶ್ರೀ ಲಕ್ಷ್ಮಣ ಪಡೆಪ್ಪ ಮೇಲ್ಗಡೆ ಇವರ ವಿರುದ್ಧ ಇಲಾಖಾ ವಿಚಾರಣೆ ಬಗ್ಗೆ.

**ಓದಲಾಗಿದೆ:** 1. ಪ.ಪೂ.ಶಿ.ಇ.: ಇಇ:142:2001-02, ದಿನಾಂಕ:17.07.2001.

2. ಆದೇಶ ಸಂಖ್ಯೆ: ಪ.ಪೂ.ಶಿ.ಇ.:ಇಇ:142:2001-02, ದಿನಾಂಕ:14.10.2004.
3. ಆದೇಶ ಸಂಖ್ಯೆ: ಪ.ಪೂ.ಶಿ.ಇ.:ಇಇ:142:2001-02 ದಿನಾಂಕ:22.08.2002.
4. ವಿಚಾರಣಾ ವರದಿ ದಿನಾಂಕ:25.12.2003.
5. ಎರಡನೇ ಕಾರಣ ಕೇಳುವ ನೋಟೀಸ್ ಸಂಖ್ಯೆ: ಇಡಿ 143 ಡಿಜಿಡಿ 2001 ದಿನಾಂಕ:10.01.2005.
6. ಆಪಾದಿತರ ಎರಡನೇ ಕಾರಣ ಕೇಳುವ ನೋಟೀಸಿಗೆ ಸಮಾಜಾಯಿಷಿ ದಿನಾಂಕ:24.01.2005.

**ಪ್ರಸ್ತಾವನೆ:**

ಶ್ರೀ ಲಕ್ಷ್ಮಣ್ ಪಡೆಪ್ಪ ಮೇಲ್ಗಡೆ, ಇತಿಹಾಸ ಉಪನ್ಯಾಸಕರು, ಸ.ಪ.ಪೂ.ಕಾ. ನಾಗಠಾಣ, ಬಿಜಾಪುರ ತಾಲ್ಲೂಕು, ರವರ ವಿರುದ್ಧ ಅವರು ತಮ್ಮ ಧರ್ಮಪತ್ನಿಗೆ ಮಾನಸಿಕ ಹಿಂಸೆ ನೀಡಿ ಅವರ ಸಾವಿಗೆ ಕಾರಣರಾಗಿರುತ್ತಾರೆ ಎಂಬ ಆಪಾದನೆ ಮೇಲೆ 1ರಲ್ಲಿ ಓದಲಾದ ಆದೇಶದಲ್ಲಿ ಆಪಾದಿತರನ್ನು ಸೇವೆಯಿಂದ ಅಮಾನತ್ತುಗೊಳಿಸಲಾಗಿದ್ದು, ಶಿಸ್ತುಕ್ರಮ ಕಾಯ್ದಿರಿಸಿ ಮೇಲೆ 3ರಲ್ಲಿ ಓದಲಾದ ಆದೇಶದಲ್ಲಿ ಅವರನ್ನು ಸೇವೆಯಲ್ಲಿ ಪುನರ್‌ಸ್ಥಾಪಿಸಲಾಗಿದೆ. ಮೇಲೆ 2ರಲ್ಲಿ ಓದಲಾದ ಆದೇಶದಲ್ಲಿ ಆಪಾದಿತರ ವಿರುದ್ಧ ಈ ಕೆಳಕಂಡ ಆಪಾದನೆಗಳ ಬಗ್ಗೆ ಇಲಾಖಾ ವಿಚಾರಣೆಗಳನ್ನು ನಡೆಸಲು ಆದೇಶವನ್ನು ಹೊರಡಿಸಲಾಗಿದೆ.

**ಆರೋಪ ನಂ.1**

ದಿನಾಂಕ:03.12.2000 ರಂದು ಮಧ್ಯಾಹ್ನ 4.00 ಗಂಟೆಯ ಅವಧಿಯಲ್ಲಿ ವಿಜಾಪುರ ಜಿಲ್ಲೆಯ ತೊರವಿ ಗ್ರಾಮದ ಎಸ್.ಬಿ. ಪಾಟೀಲ ಇವರ ತೋಟದ ಬಾವಿಯಲ್ಲಿ ಆರೋಪಿತ ನೌಕರರ ಪತ್ನಿಯಾದ ಶ್ರೀಮತಿ ನಾಗಮ್ಮ ಇವರು ಬಿದ್ದು ಆತ್ಮಹತ್ಯೆ ಮಾಡಿಕೊಂಡಿದ್ದು ಈ ಕೃತ್ಯಕ್ಕೆ ಆಪಾದಿತರು ಕೊಟ್ಟ ಮಾನಸಿಕ ಹಿಂಸೆಯೇ ಕಾರಣವಾಗಿದೆ ಎಂಬ ಆರೋಪವು ಶ್ರೀ ಎಲ್.ಪಿ. ಮೇಲ್ಗಡೆ ಇವರ ಮೇಲೆ ಇರುತ್ತದೆ.

**ಆರೋಪ ನಂ.2**

ಆಪಾದಿತ ನೌಕರರು ತಮ್ಮ ಪತ್ನಿಯ ಅಸಹಜ ಸಾವಿನ ಕಾರಣದಿಂದಾಗಿ ಪೊಲೀಸರಿಂದ ದಸ್ತಗಿರಿಯಾಗಿ ಜೈಲಿಗೆ ಹೋಗಿ ಜಾಮೀನಿನ ಮೇಲೆ ಬಿಡುಗಡೆಯಾಗಿ ಬಂದಿದ್ದರೂ ಕೂಡ ಈ ವಿಚಾರವನ್ನು ಮೇಲಾಧಿಕಾರಿಗಳಿಗೆ ವರದಿ ಮಾಡದೇ ನಡತೆ ನಿಯಮ-3(1) 3(2) 3(3) ನ್ನು ಉಲ್ಲಂಘಿಸಿರುತ್ತಾರೆ ಎಂಬ ಆಪಾದನೆ ಶ್ರೀ ಎಲ್.ಪಿ. ಮೇಲ್ಗಡೆ ಇವರ ಮೇಲಿರುತ್ತದೆ. ಆಪಾದಿತ ನೌಕರರು ತಮ್ಮ ಮೇಲೆ ಕ್ರಿಮಿನಲ್ ಮೊಕದ್ದಮೆ ದಾಖಲಾದ ಬಗ್ಗೆಯಾಗಲೀ ಹಾಗೂ ಈ ಬಗ್ಗೆ ಪೊಲೀಸ್ ಅಧಿಕಾರಿಗಳಿಂದ ದಸ್ತಗೀರಾಗಿ ಜೈಲಿಗೆ ಹೋದ ವಿಷಯವನ್ನೂ ಸಹ ಇಲಾಖೆಗೆ ವರದಿ ಮಾಡಿರುವುದಿಲ್ಲ. ಇದಲ್ಲದೇ ಆಪಾದಿತ ನೌಕರರು ಜೈಲಿನಿಂದ ಬಿಡುಗಡೆಯಾಗಿ ಜಾಮೀನಿನ ಮೇಲೆ ಬಂದ ನಂತರವೂ ಸಹ ಸದರಿ ವಿಷಯವನ್ನು ತಾವು ಕಾರ್ಯನಿರ್ವಹಿಸುತ್ತಿರುವ ಕಾರ್ಯಾಲಯದ ಮುಖ್ಯಸ್ಥರಿಗೆ ವರದಿ ಮಾಡದೇ ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮ 1966ರ ನಿಯಮ 3(1) (2) (3)ನ್ನು ಉಲ್ಲಂಘನೆ ಮಾಡಿದ್ದು ಸ್ಪಷ್ಟವಾಗಿದೆ.

ಮೇಲ್ಕಂಡ ಆರೋಪಗಳ ಬಗ್ಗೆ ವಿಚಾರಣೆಯನ್ನು ನಡೆಸಿದ್ದು, ದಿನಾಂಕ:25.12.2003ರಲ್ಲಿ ನೀಡಿದ ವಿಚಾರಣಾ ವರದಿಯನ್ನು ಸರ್ಕಾರದಲ್ಲಿ ಪರಿಶೀಲಿಸಲಾಗಿ ಆರೋಪ ಒಂದರ ಬಗ್ಗೆ ಕ್ರಿಮಿನಲ್ ನ್ಯಾಯಾಲಯದಲ್ಲಿ ನೀಡಲಾಗಿರುವ ಅಂತಿಮ ತೀರ್ಪಿನ ನಂತರ ನಿರ್ಧರಿಸಬೇಕಿದೆ. ಆರೋಪ 2ರ ಬಗ್ಗೆ ಅಂದರೆ ಆಪಾದಿತರು ತಮ್ಮ ಪತ್ನಿಯ ಅಸಹಜ ಸಾವಿನ ಕಾರಣದಿಂದ ಪೊಲೀಸರಿಂದ ದಸ್ತುಗಿರಿಯಾಗಿ ಜೈಲಿಗೆ ಹೋಗಿ ಜಾಮೀನಿನ ಮೇಲೆ ಬಿಡುಗಡೆಯಾಗಿ ಬಂದ ವಿಷಯವನ್ನು ಮೇಲಾಧಿಕಾರಿಗಳಿಗೆ ವರದಿ ಮಾಡದೇ ಕೆ.ಸಿ.ಎಸ್. (ಸಿಸಿ) ನಿಯಮ 3(1) 3(2) 3(3)ನ್ನು ಉಲ್ಲಂಘಿಸಿರುವುದು ನಿಸ್ಸಂದೇಹವಾಗಿ ಸಾಬೀತಾಗಿದೆ ಎಂದು ನಮೂದಾಗಿದೆ ಆರೋಪ ಈ ಬಗ್ಗೆ ವಿಚಾರಣಾ ವರದಿಯ ಪ್ರತಿಯನ್ನು ಮೇಲೆ 5ರಲ್ಲಿ ಓದಲಾದ 2ನೇ ಕಾರಣ ಕೇಳುವ ನೋಟೀಸ್ ಜೊತೆಗೆ ಆಪಾದಿತರಿಗೆ ನೀಡಿ ಸಮಜಾಯಿಷಿ ಕೋರಿದ್ದು ಮೇಲೆ 6ರಲ್ಲಿ ಓದಲಾದ ಸಮಜಾಯಿಷಿಯನ್ನು ಸರ್ಕಾರದಲ್ಲಿ ಪರಿಶೀಲಿಸಲಾಗಿದೆ.

ಆಪಾದನೆ 1ರ ಬಗ್ಗೆ ಕ್ರಿಮಿನಲ್ ನ್ಯಾಯಾಲಯದಲ್ಲಿ ಅವರ ಮೇಲಿನ ಆರೋಪವನ್ನು ಪ್ರಾಸಿಕ್ಯೂಷನ್‌ರವರು ಸಾಬೀತು ಮಾಡಲು ಸಾಧ್ಯವಾಗದೇ ಇದ್ದ ಪ್ರಯುಕ್ತ ಅವರನ್ನು ದೋಷಮುಕ್ತರನ್ನಾಗಿ ಘೋಷಿಸಲಾಗಿದ್ದು, ಈ ಬಗ್ಗೆ ಯಾವುದೇ ಮೇಲ್ಮನವಿ ಸಲ್ಲಿಸದಿರುವುದರಿಂದ ಇವರ ಸಮಜಾಯಿಷಿಯನ್ನು ಒಪ್ಪಲಾಗಿದೆ. ಆರೋಪ 2ರ ಬಗ್ಗೆ ಇವರು ತಮ್ಮ ಪತ್ನಿಗೆ ಮಾನಸಿಕ ಹಿಂಸೆ ನೀಡಿ ಅವರ ಸಾವಿಗೆ ಕಾರಣರಾಗಿದ್ದಾರೆ ಎಂಬ ಬಗ್ಗೆ ದಸ್ತಗಿರಿಯಾಗಿ ಜಾಮೀನಿನ ಮೇಲೆ ಬಿಡುಗಡೆಯಾಗಿ ಬಂದರೂ ಸಹ ಆ ವಿಷಯವನ್ನು ಮರೆಮಾಚಿ ತಮ್ಮ ಮೇಲಾಧಿಕಾರಿಗಳಿಗೆ ವರದಿ ಮಾಡದೇ ಇರುವ ಆರೋಪ ನಿಸ್ಸಂದೇಹವಾಗಿ ಸಾಬೀತಾಗುತ್ತದೆ.

2ನೇ ಆರೋಪವು ಇದರಿಂದ ಸ್ಥಿರಪಡುತ್ತದೆಂದು ಸರ್ಕಾರವು ಪರಿಗಣಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: 143 ಡಿಜಿಡಿ 2001, ದಿನಾಂಕ:3ನೇ ಆಗಸ್ಟ್, 2006**

1. ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳ ಹಿನ್ನೆಲೆಯಲ್ಲಿ ಶ್ರೀ ಲಕ್ಷ್ಮಣ ಪಡೆಪ್ಪ ಮೇಲ್ಗಡೆ, ಇತಿಹಾಸ ಉಪನ್ಯಾಸಕರು, ಸ.ಪೂ.ಪ.ಕಾ. ನಾಗಠಾಣ, ಬಿಜಾಪುರ ಜಿಲ್ಲೆ, ಇವರಿಗೆ ಕರ್ನಾಟಕ ನಾಗರೀಕ ಸೇವೆ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ 8(iii) ರಂತೆ ಅವರ ವೇತನವನ್ನು ಮೂರು (3) ಹಂತಗಳನ್ನು ಕೆಳಗೆ ಇಳಿಸಿ ಸಂಚಿತ ಪರಿಣಾಮ ಬೀರುವಂತೆ ದಂಡನೆಯನ್ನು ವಿಧಿಸಲಾಗಿದೆ.

2. ಶ್ರೀಯುತರು ಅಮಾನತ್ತಿನಲ್ಲಿ ಕಳೆದ ಅವಧಿಯನ್ನು "ಅಮಾನತ್ತು" ಎಂದೇ ಪರಿಗಣಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸ್ವರ್ಣಲತ ಎಂ. ಭಂಡಾರೆ**

ಸರ್ಕಾರದ ಅಧೀನ ಕಾರ್ಯದರ್ಶಿ,

ಶಿಕ್ಷಣ ಇಲಾಖೆ (ಸೇವೆಗಳು-1,2)

ಪಿ.ಆರ್. 1186

**ವಿಷಯ:** ಸಾರ್ವಜನಿಕ ಶಿಕ್ಷಣ ಇಲಾಖೆಯ ಉತ್ತರ ಕರ್ನಾಟಕ ಆಯುಕ್ತಾಲಯಗಳ ಹುದ್ದೆಗಳನ್ನು 01.04.2006ರಿಂದ ಒಂದು ವರ್ಷದವರೆಗೆ ಮುಂದುವರಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಇಡಿ 163 ಯೋಯೋಕಾ 2003, ದಿನಾಂಕ:10.11.2005 (ಇಡಿ 151 ಸ್ಪೀಮರ (ಯುನಿಕ್) 2003 ದಿನಾಂಕ:10.11.2003)
2. ಸರ್ಕಾರಿ ಆದೇಶ ಸಂಖ್ಯೆ: ಇಡಿ 163 ಯೋಯೋಕಾ 2004, ದಿನಾಂಕ:10.11.2004 (ಇಡಿ 52 ಸ್ಪೀಮರ (ಯುನಿಕ್) 2003 ದಿನಾಂಕ:12.10.2004)
3. ಸರ್ಕಾರಿ ಆದೇಶ ಸಂಖ್ಯೆ: ಇಡಿ 212 ಯೋಯೋಕ 2004 ದಿನಾಂಕ:06.11.2004.
4. ಸರ್ಕಾರಿ ಆದೇಶ ಸಂಖ್ಯೆ: ಇಡಿ 48 ಯೋಯೋಕ 2005 ದಿನಾಂಕ:18.10.2005 (ಇಡಿ 50 ಸ್ಪೀಮರ (ಯುನಿಕ್) 2005 ದಿನಾಂಕ:18.10.2005)
5. ಅಪರ ಆಯುಕ್ತರ ಕಾರ್ಯಾಲಯ, ಸಾರ್ವಜನಿಕ ಶಿಕ್ಷಣ ಇಲಾಖೆ, ಧಾರವಾಡ ಇವರ ಪತ್ರ ಸಂಖ್ಯೆ: ಎ1/ ಲೆ.ಪ./ ಕ.ಹಂ.ಮುಂ/ 05-06, ದಿನಾಂಕ:07.01.2006.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ದಿನಾಂಕ:10.11.2003ರ ಸರ್ಕಾರಿ ಆದೇಶದಲ್ಲಿ 11 ಹುದ್ದೆಗಳನ್ನು ಸೃಜಿಸಲಾಯಿತು ಹಾಗೂ ಸಾರ್ವಜನಿಕ ಶಿಕ್ಷಣ ಇಲಾಖೆಯ ಬೆಂಗಳೂರು ಆಯುಕ್ತಾಲಯದಿಂದ ಉತ್ತರ ಕರ್ನಾಟಕದ ಆಯುಕ್ತಾಲಯಗಳಿಗೆ ಹುದ್ದೆಗಳನ್ನು ವರ್ಗಾಯಿಸಲಾಯಿತು. ಸದರೀ ಮೇಲೆ (2)ರಲ್ಲಿ ಓದಲಾದ ದಿನಾಂಕ:10.11.2004ರ ಸರ್ಕಾರಿ ಆದೇಶದಲ್ಲಿ 01.04.2004 ರಿಂದ ಒಂದು ವರ್ಷಗಳ ಅವಧಿಗೆ ಮುಂದುವರಿಸಲಾಯಿತು. ಅನಂತರ ಹುದ್ದೆಗಳ ವರ್ಗಾವಣೆಗಳನ್ನು ಪರಿಷ್ಕರಿಸಿ (3)ರಲ್ಲಿ ಓದಲಾದ ದಿನಾಂಕ:06.11.2004ರ ಧಾರವಾಡ ಆಯುಕ್ತಾಲಯಕ್ಕೆ 81 ಹುದ್ದೆಗಳನ್ನು

ವರ್ಗಾಯಿಸಲಾಯಿತು. ಮೇಲೆ (4) ಓದಲಾದ ದಿನಾಂಕ:18.10.2005ರ ಸರ್ಕಾರಿ ಆದೇಶದಲ್ಲಿ 01.04.2005 ರಿಂದ ಒಂದು ವರ್ಷಗಳ ಅವಧಿಗೆ ಮುಂದುವರಿಸಲಾಯಿತು. ಸದರಿ 81 ಹಾಗೂ 11 ಒಟ್ಟು 92 ಹುದ್ದೆಗಳನ್ನು ಖಾಯಂ ಹುದ್ದೆಗಳೆಂದು ಪರಿಗಣಿಸುವಂತೆ ಅಪರ ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಧಾರವಾಡ ಅವರು ಮೇಲೆ (5)ರಲ್ಲಿ ಓದಲಾದ ದಿನಾಂಕ:07.01.2006ರ ತಮ್ಮ ಪತ್ರದಲ್ಲಿ ಕೋರಿದ್ದಾರೆ. ಸದರಿ ಹುದ್ದೆಗಳನ್ನು ಒಂದು ವರ್ಷದ ಅವಧಿಗೆ ಮುಂದುವರಿಸುವ ಕುರಿತು ಪರಿಶೀಲಿಸಿದ ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 17 ಯೋಯೋಕ 2006, ಬೆಂಗಳೂರು, ದಿನಾಂಕ:2ನೇ ಆಗಸ್ಟ್, 2006**

**(ಡಿ 73 ಸ್ಕೀಮರ (ಯುನಿಕ್) 2006 ದಿನಾಂಕ:2ನೇ ಆಗಸ್ಟ್, 2006)**

ಸರ್ಕಾರವು ಸಾರ್ವಜನಿಕ ಶಿಕ್ಷಣ ಇಲಾಖೆ, ಆಯುಕ್ತಾಲಯ, ಧಾರವಾಡ ಈ ವ್ಯಾಪ್ತಿಯಲ್ಲಿರುವ ಕೆಳಕಂಡ ಹುದ್ದೆಗಳನ್ನು 01.04.2006 ರಿಂದ 31.03.2007ರವರೆಗೆ ಮುಂದುವರಿಸುತ್ತದೆ.

**ದಿನಾಂಕ: 10.11.2004ರ ಸರ್ಕಾರಿ ಆದೇಶದಲ್ಲಿ ಸೃಜಿಸಲಾದ ಹುದ್ದೆಗಳು:**

| | |
|---|---|
| 1. ಆಯುಕ್ತರು | 01 ಹುದ್ದೆ |
| 2. ನಿರ್ದೇಶಕರು | 01 ಹುದ್ದೆ |
| 3. ಸಹ ನಿರ್ದೇಶಕರು | 01 ಹುದ್ದೆ |
| 4. ಉಪ ನಿರ್ದೇಶಕರು | 02 ಹುದ್ದೆಗಳು |
| 5. ಮುಖ್ಯ ಲೆಕ್ಕಾಧಿಕಾರಿಗಳು | 01 ಹುದ್ದೆ |
| 6. ಸಾರ್ವಜನಿಕ ಸಂಪರ್ಕಾಧಿಕಾರಿ | 01 ಹುದ್ದೆ |
| 7. ಕಿರಿಯ ಸಂಶೋಧನಾಧಿಕಾರಿ | 01 ಹುದ್ದೆ |
| 8. ಯೋಜನಾ ಸಹಾಯಕರು | 01 ಹುದ್ದೆ |
| 9. ಕಲಾಕಾರರು | 01 ಹುದ್ದೆ |
| 10. ಕಂಪ್ಯೂಟರ್ ಅನಾಲಿಸ್ಟ್ | 01 ಹುದ್ದೆ |
| **ಒಟ್ಟು** | **11 ಹುದ್ದೆಗಳು** |

ವರ್ಗಾಯಿಸಿದ ಹುದ್ದೆಗಳು:

| | |
|---|---|
| 1. ಹಿರಿಯ ಸಹಾಯಕರು | 02 ಹುದ್ದೆಗಳು |
| 2. ಸಹಾಯಕ ನಿರ್ದೇಶಕರು | 02 ಹುದ್ದೆಗಳು |
| 3. ಅಧೀಕ್ಷಕರು (ಲೆಕ್ಕ ಪತ್ರ ಅಧೀಕ್ಷಕರು ಸಹಾಯಕ ಸಾಂಖ್ಯಿಕ ಸೇರಿದಂತೆ) | 08 ಹುದ್ದೆಗಳು |
| 4. ಪ್ರಥಮ ದರ್ಜೆ ಸಹಾಯಕರು (ಶೀಘ್ರಲಿಪಿಗಾರರು ಸೇರಿದಂತೆ) | 34 ಹುದ್ದೆಗಳು |
| 5. ದ್ವಿತೀಯ ದರ್ಜೆ ಸಹಾಯಕರು ಬೆರಳಚ್ಚುಗಾರರು | 25 ಹುದ್ದೆಗಳು |
| 6. ಡಿ ಗ್ರೂಪ್ ದಲಾಯತ್ | 10 ಹುದ್ದೆಗಳು |
| **ಒಟ್ಟು** | **81 ಹುದ್ದೆಗಳು** |
| **ಒಟ್ಟಾರೆ** | **92 ಹುದ್ದೆಗಳು** |

ಶಿಕ್ಷಣ ಇಲಾಖೆಯ ಆಂತರಿಕ ಆರ್ಥಿಕ ಸಲಹೆಗಾರರ ಸಹಮತಿಯನ್ನು ಅ.ಟಿ. ಸಂಖ್ಯೆ: ಶಿಇ 119 ಐಎಫ್ (ಬಿಎ) 2006 ದಿನಾಂಕ:10.07.2006ರಲ್ಲಿ ಪಡೆದು ಈ ಆದೇಶವನ್ನು ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಶ್ರೀಕಂಠೇಶ್ವರ**

ವಿಶೇಷಾಧಿಕಾರಿ ಹಾಗೂ ಪದನಿಮಿತ್ತ

ಸರ್ಕಾರದ ಸಹ ಕಾರ್ಯದರ್ಶಿ (ಯೋಜನೆ),

ಶಿಕ್ಷಣ ಇಲಾಖೆ.

ಪಿ.ಆರ್. 1187

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

## ಸುತ್ತೋಲೆ

**ಸಂಖ್ಯೆ: ಸಿಆಸುಇ 58 ರಾರಾಆ 2006, ಬೆಂಗಳೂರು, ದಿನಾಂಕ:27ನೇ ಜುಲೈ, 2006**

**ವಿಷಯ:** ಆಗಸ್ಟ್-15- "ಸ್ವಾತಂತ್ರ್ಯ ದಿನಾಚರಣೆ".

ರಾಷ್ಟ್ರವು ಆಗಸ್ಟ್ 15 ರಂದು ಸ್ವಾತಂತ್ರ್ಯ ದಿನಾಚರಣೆಯನ್ನು ಆಚರಿಸುತ್ತಲಿದೆ. ಈ ದಿವಸವು ನಮ್ಮ ಇತಿಹಾಸದಲ್ಲಿ ಒಂದು ಮಹತ್ತರವಾದ ಮೈಲುಗಲ್ಲಾಗಿದೆ. ಸ್ವತಂತ್ರ ಭಾರತದ ಪ್ರಥಮ ಪ್ರಧಾನಿಯವರಾದ ಪಂಡಿತ್ ಜವಹರಲಾಲ್ ಅವರ ಪದಗಳಲ್ಲಿ ವರ್ಣಿಸಿರುವಂತೆ "A MOMENT COMES, WHICH COMES RARELY IN HISTORY, WHEN WE STEP OUT FROM THE OLD TO THE NEW, WHEN AN AGE ENDS AND WHEN THE SOUL OF A NATION, LONG SUPPRESSED, FINDS UTTERANCE."

ರಾಷ್ಟ್ರವ್ಯಾಪಿ ಆಚರಿಸುವ ಈ ಸುಸಂದರ್ಭವು ನಮ್ಮ ಪೂರ್ವಿಕರು ಮಾಡಿರುವ ತ್ಯಾಗವನ್ನು ಮತ್ತು ಸ್ವಾತಂತ್ರ್ಯವನ್ನು ಕಾಪಾಡಲು ನಮ್ಮ ಮೇಲೆ ಹೊರಿಸಿರುವ ಜವಾಬ್ದಾರಿಯನ್ನು ಹಾಗೂ ರಾಷ್ಟ್ರವನ್ನು ಸರಿಯಾದ ದಿಕ್ಕಿನಲ್ಲಿ ಭವಿಷ್ಯದ ಕಡೆಗೆ ಕೊಂಡೊಯ್ಯುವ ಜವಾಬ್ದಾರಿಯನ್ನು ನೆನಪಿಸುತ್ತದೆ. ಈ ಸಂದರ್ಭವು ನಮ್ಮನ್ನು ನಾವು ರಾಷ್ಟ್ರದ ಹಾಗೂ ಪ್ರಜೆಗಳ ಸೇವೆಗಾಗಿ ಸಮರ್ಪಿಸಿಕೊಳ್ಳುವ ಪರ್ವಕಾಲವಾಗಿರುತ್ತದೆ.

ಬೆಂಗಳೂರಿನಲ್ಲಿ ಈ ದಿನದಂದು ಪ್ರಾತಃಕಾಲ ಕವಾಯಿತು ಮೈದಾನದಲ್ಲಿ (Parade Ground) ಧ್ವಜಾರೋಹಣ ಮತ್ತು ಸ್ವಾತಂತ್ರ್ಯ ದಿನಾಚರಣೆಯ ಕವಾಯಿತಿನೊಂದಿಗೆ ಪ್ರಾರಂಭವಾಗಿ ಸಾಯಂಕಾಲ ಗೌರವಾನ್ವಿತ ರಾಜ್ಯಪಾಲರ ಅಧಿಕೃತ ನಿವಾಸದಲ್ಲಿ ರಾಜ್ಯಪಾಲರೇ ಆಮಂತ್ರಿಸುವ ಉನ್ನತಮಟ್ಟದ ಅಧಿಕಾರಿಗಳ ಮತ್ತು ಅಧಿಕಾರೇತರರ ಸಮಾವೇಶದಲ್ಲಿ ಸಾಂಪ್ರದಾಯಿಕವಾಗಿ ನಡೆಯುವ ಸಮಾರಂಭದೊಂದಿಗೆ ಮುಕ್ತಾಯಗೊಳ್ಳುತ್ತದೆ. ಈ ಸಭೆ/ ಸಮಾರಂಭದಲ್ಲಿ ಇತರ ಆಮಂತ್ರಿತರು ಸಡಗರದಿಂದ ಹಾಗೂ ಉಲ್ಲಾಸಭರಿತರಾಗಿ ಭಾಗವಹಿಸುವ ಅಂಶ ಸಾಮಾನ್ಯವಾಗಿ ಕಂಡುಬಂದರೆ, ಅಧಿಕಾರಿಗಳಲ್ಲಿ ಅದರ ಅಭಾವ ಎದ್ದು ಕಾಣುತ್ತದೆ. ಸರ್ಕಾರಿ ಅಧಿಕಾರಿಗಳು ಈ ಸಮಾರಂಭದಲ್ಲಿ ಗೈರುಹಾಜರಾಗುವುದನ್ನು ಸ್ವಾಭಾವಿಕವಾಗಿ ಗ್ರಹಿಸಬಹುದಾಗಿದೆ. ಕವಾಯಿತು ಮೈದಾನದಲ್ಲಿ ಅಧಿಕಾರಿಗಳಿಗೆ ಮೀಸಲಿರಿಸಿದ ಸ್ಥಾನಗಳು ಖಾಲಿಯಿರುತ್ತವೆ ಮತ್ತು ರಾಜ್ಯಪಾಲರ ನಿವಾಸದಲ್ಲಿನ ಸಮಾರಂಭದಲ್ಲಿ ಅಧಿಕಾರಿಗಳ ಹಾಜರಾತಿ ಅತ್ಯಲ್ಪ ಹಾಗೂ ಅಗತ್ಯವಾಗಿರುತ್ತದೆ. ಅಧಿಕಾರಿಗಳ ಈ ಗೈರುಹಾಜರಿಯನ್ನು ಮಾನ್ಯ ರಾಜ್ಯಪಾಲರನ್ನು ಒಳಗೊಂಡಂತೆ ಇತರ ಗಣ್ಯರು ಸರ್ಕಾರದ ಗಮನಕ್ಕೆ ತರುತ್ತಿರುತ್ತಾರೆ.

ಸರ್ಕಾರದ ಹಿರಿಯ ಅಧಿಕಾರಿಗಳ ಈ ನಡತೆ ಮತ್ತು ವರ್ತನೆಯು ಅಕ್ಷಮ್ಯವಾದುದು. ಸ್ವಾತಂತ್ರ್ಯ ದಿನಾಚರಣೆ ಆಚರಿಸುವುದು ಮತ್ತು ಆ ಸಮಾರಂಭದಲ್ಲಿ ಅಧಿಕಾರಿಗಳು ಭಾಗವಹಿಸುವುದು ಅವರ ಒಂದು ಕರ್ತವ್ಯವಾಗಿದ್ದು, ಈ ಸಮಾರಂಭಕ್ಕೆ ಹಾಜರಾಗುವುದು ಅಧಿಕಾರಿಗಳ ಇಚ್ಛೆಗೆ ಬಿಟ್ಟ ವಿಷಯವೆಂದು ಕಡೆಗಣಿಸಲು ಬರುವುದಿಲ್ಲ. ಸರ್ಕಾರದ ಮತ್ತು ಘನತೆವೆತ್ತ ರಾಜ್ಯಪಾಲರ ಆಮಂತ್ರಣವನ್ನು ಪಾಲಿಸಬೇಕಾದ ಅಂತರ್ಗತ ಆದೇಶವೆಂದು ಪರಿಗಣಿಸಬೇಕು ಮತ್ತು ಅಂತಹ ಆಮಂತ್ರಣವನ್ನು ಅನೌಪಚಾರಿಕ ಕೂಟಕ್ಕೆ ನೀಡಿದ ಆಮಂತ್ರಣವೆಂದು ಗ್ರಹಿಸಬಾರದು. ಈ ರೀತಿಯ ಸಂದರ್ಭಗಳೂ ಔಪಚಾರಿಕವಾಗಿ ಸರ್ಕಾರಿ ಘಟನೆಗಳಾಗಿದ್ದು, ಅದರಲ್ಲಿ ಅಧಿಕಾರಿಗಳ ಪಾಲ್ಗೊಳ್ಳುವಿಕೆಯು ಅಧ್ಯಾದೇಶಿಯಾ ಹಾಗೂ ಕಡ್ಡಾಯವಾಗಿರುತ್ತದೆ.

ಸ್ವಾತಂತ್ರ್ಯ ದಿನಾಚರಣೆಯ ಸಮಾರಂಭದಲ್ಲಿ ಹಾಗೂ ಘನತೆವೆತ್ತ ರಾಜ್ಯಪಾಲರು ಅವರ ನಿವಾಸದಲ್ಲಿ ನಡೆಸುವ ಸಾಂಪ್ರದಾಯಿಕ ಸಮಾರಂಭಕ್ಕೆ ಆಹ್ವಾನಿತರಾದ ಎಲ್ಲಾ ಅಧಿಕಾರಿಗಳು ತಮ್ಮ ಕರ್ತವ್ಯ ಎಂದು ಭಾವಿಸಿ ಸಮಾರಂಭದಲ್ಲಿ ಹಾಜರಾಗತಕ್ಕದ್ದು ಮತ್ತು ಸಾಕಷ್ಟು ಹಾಗೂ ಸಮರ್ಥನೀಯವಾದ ಕಾರಣಗಳಿಲ್ಲದೆ ಗೈರುಹಾಜರಾಗತಕ್ಕದ್ದಲ್ಲ. ಒಂದು ವೇಳೆ ಅನಾರೋಗ್ಯ ಅಥವಾ ಇತರ ಅನಿವಾರ್ಯ ಕಾರಣದ ಮೇಲೆ ಸಮಾರಂಭಕ್ಕೆ ಹಾಜರಾಗಲು ಸಾಧ್ಯವಾಗದ ಸಂದರ್ಭಗಳಲ್ಲಿ ಸಕ್ಷಮ ಪ್ರಾಧಿಕಾರದ ಪೂರ್ವಾನುಮತಿ ಪಡೆಯತಕ್ಕದ್ದು. ಒಂದು ವೇಳೆ ಘನತೆವೆತ್ತ ರಾಜ್ಯಪಾಲರ ನಿವಾಸದಲ್ಲಿ ನಡೆಯುವ ಸಮಾರಂಭದಲ್ಲಿ ಪಾಲ್ಗೊಳ್ಳಲು ಸಾಧ್ಯವಾಗದ ಅನಿವಾರ್ಯ ಸಂದರ್ಭಗಳಲ್ಲಿ ಘನತೆವೆತ್ತ ರಾಜ್ಯಪಾಲರ ಕಾರ್ಯದರ್ಶಿಯವರಿಗೆ "RSVP" ಟಿಪ್ಪಣಿಯ ಮುಖಾಂತರ ಚಾಚೂ ತಪ್ಪದೆ ಅವರ ಗಮನಕ್ಕೆ ತರತಕ್ಕದ್ದು.

ಈ ಸುತ್ತೋಲೆಯಲ್ಲಿನ ಸೂಚನೆಗಳು ಸ್ವಾತಂತ್ರ್ಯ ದಿನಾಚರಣೆಯಂತಹ ಎಲ್ಲಾ ಸಮಾರಂಭಗಳಿಗೆ ಹಾಗೂ ಜಿಲ್ಲಾ ಮಟ್ಟದಲ್ಲಿ ನಡೆಯುವ ಸಮಾರಂಭಗಳಿಗೆ ಅನ್ವಯವಾಗುತ್ತದೆ. ಈ ಸುತ್ತೋಲೆಯಲ್ಲಿನ ಸೂಚನೆಗಳನ್ನು ಉಲ್ಲಂಘಿಸುವ ಅಧಿಕಾರಿಗಳು ಶಿಸ್ತು ಕ್ರಮಗಳಿಗೆ ಒಳಗಾಗುತ್ತಾರೆ.

ಸಹಿ:

**ಬಿ.ಕೆ. ದಾಸ್**

ಮುಖ್ಯ ಕಾರ್ಯದರ್ಶಿ.

## PERSONNEL AND ADMINISTRATIVE REFORMS SECRETARIAT

## CIRCULAR

### No. DPAR 58 HCR 2006, Bangalore, Dated:27th July, 2006

**Sub:** "INDEPENDENCE DAY"- 15th August.

The nation will celebrate its Independence Day on the 15th of August. This day marks a significant milestone in our history and in the words of our first Prime Minister of Independent India, Shri Jawaharlal Nehru "A MOMENT COMES, WHICH COMES RARELY IN HISTORY, WHEN WE STEP OUT FROM THE OLD TO THE NEW, WHEN AN AGE ENDS AND WHEN THE SOUL OF A NATION, LONG SUPPRESSED, FINDS UTTERANCE".

The nationwide celebrations is an occasion that reminds us of the scrifices of our forefathers and the responsibilities cast upon us to maintain that freedom and take the nation forward to its rightful destiny and challenges of the future. It is a solemn moment when we again take the pledge of dedication to the service of the nation and her people.

At Bangalore, the day will be marked with the hoisting of the National Flag and an Independence Day parade, in the morning and H.E. the Governor's "At Home" in the evening Government of Karnataka and H.E. the Governor invite all civil servants at the appropriate level to join the events and make the celebrations a grand affair. While most other invitees attend the celebrations with enthusiasm, there appears to be a general lack of enthusiasm amongst civil servants in attending the events. Their absence from the events is prominently perceptible At the parade, the places set apart for their seating is visibly empty and at the "At Home" their presence is scanty and almost not visible Such conspicuous absence has been notices and has often been mentioned to the Government by many dignitaries including H.E. the Governor.

Such conduct and behaviour on the part of our senior officers is not something that can be condoned. The celebrations of Independence Day and attendance at those celebrations is duty for all

purposes and cannot be looked upon as something that can be dispensed with, as optional or voluntary. The invitation from the Government and H.E. the Governor are to be treated as an Order to be obeyed implicity and not to be taken as an invitation to a party or an informal get-together. These events are formal official events where attendance is mandatory and compulsory.

All invitees to the "Independence Day Parade" and the 'At Home' of H.E. the Governor of Karnataka shall, therefore, attend these events/ celebrations without demur as their normal duties, and shall not be absent from these events without sufficient cause and reason. In the event of one's inability to attend due to unavoldable circumstances, such as illness or such other causes, prior approval of the competent authority shall be taken and in case, absence from the "At Home" becomes inevitable in the circumstances illustraed above, the Secretary to H.E. the Governor shall invariably be kept informed through a formal 'R.S.V.P' note.

These circular instructions are equally applicable to such events and celebrations at the district level too. Any violation of the instructions contained in this Circular shall invite disciplinary action against the erring officer/s.

Sd/-
**B.K. DAS**
Chief Secretary.
**B. VEERANNA**
Under Secretary to Government,
Personnel and Administrative
Reforms Department. (Political).

PR-1188

## ಆರ್ಥಿಕ ಸಚಿವಾಲಯ

**ವಿಷಯ:** ಶ್ರೀ ಎಂ.ಬಿ. ಪ್ರಕಾಶ್, ಐ.ಎ.ಎಸ್. (ನಿವೃತ್ತ) ಇವರನ್ನು 5ನೇ ರಾಜ್ಯ ವೇತನ ಆಯೋಗದ ಅಧ್ಯಕ್ಷರನ್ನಾಗಿ ನೇಮಿಸುವ ಕುರಿತು.

**ಸರ್ಕಾರಿ ಆದೇಶ ಸಂಖ್ಯೆ: ಆಇ 11 ಎಸ್‌ಆರ್‌ಪಿ 2003, ಬೆಂಗಳೂರು, ದಿನಾಂಕ: 3ನೇ ಆಗಸ್ಟ್, 2006**

ಸರ್ಕಾರವು ಸರ್ಕಾರಿ ಆದೇಶ ಸಂಖ್ಯೆ: ಆಇ 11 ಎಸ್‌ಆರ್‌ಪಿ 2003 ದಿನಾಂಕ:21ನೇ ಜೂನ್ 2005ರಲ್ಲಿ ರಾಜ್ಯ ಸರ್ಕಾರಿ ನೌಕರರ ವೇತನ ಶ್ರೇಣಿಗಳನ್ನು ಪರಿಷ್ಕರಿಸಲು ಮತ್ತು ನೂತನ ವೇತನ ರಚನೆ ಇತ್ಯಾದಿಗಳನ್ನು ರೂಪಿಸಲು ಶ್ರೀ ಸಿ. ಗೋಪಾಲ ರೆಡ್ಡಿ, ನಿವೃತ್ತ ಕೇಂದ್ರ ಸರ್ಕಾರದ ಕಾರ್ಯದರ್ಶಿ ಇವರ ಅಧ್ಯಕ್ಷತೆಯಲ್ಲಿ ಏಕ ಸದಸ್ಯ 5ನೇ ರಾಜ್ಯ ವೇತನ ಆಯೋಗವನ್ನು ರಚಿಸಲಾಗಿದ್ದುದರಿಂದಲೂ,

2. ಶ್ರೀ ಸಿ. ಗೋಪಾಲ ರೆಡ್ಡಿ, ನಿವೃತ್ತ ಕೇಂದ್ರ ಸರ್ಕಾರದ ಕಾರ್ಯದರ್ಶಿ ಇವರ ಮರಣದಿಂದ 5ನೇ ರಾಜ್ಯವೇತನ ಆಯೋಗದ ಅಧ್ಯಕ್ಷರ ಸ್ಥಾನವು ಖಾಲಿಯಾಗಿರುವುದರಿಂದಲೂ;

3. ಸರ್ಕಾರವು ಶ್ರೀ ಎಂ.ಬಿ. ಪ್ರಕಾಶ್, ನಿವೃತ್ತ ಅಪರ ಮುಖ್ಯ ಕಾರ್ಯದರ್ಶಿ, ಕರ್ನಾಟಕ ಸರ್ಕಾರ ಇವರನ್ನು ದಿವಂಗತ ಶ್ರೀ ಸಿ. ಗೋಪಾಲ ರೆಡ್ಡಿ, ನಿವೃತ್ತ ಕೇಂದ್ರ ಸರ್ಕಾರದ ಕಾರ್ಯದರ್ಶಿ ಇವರ ಸ್ಥಾನದಲ್ಲಿ ಏಕ ಸದಸ್ಯ 5ನೇ ರಾಜ್ಯ ವೇತನ ಆಯೋಗದ ಅಧ್ಯಕ್ಷರನ್ನಾಗಿ ನೇಮಕ ಮಾಡಲು ಸರ್ಕಾರ ತೀರ್ಮಾನಿಸಿರುವುದರಿಂದಲೂ;

4. ಆದ್ದರಿಂದ, ಈಗ ಸರ್ಕಾರವು ಶ್ರೀ ಎಂ.ಬಿ. ಪ್ರಕಾಶ್, ನಿವೃತ್ತ ಅಪರ ಮುಖ್ಯ ಕಾರ್ಯದರ್ಶಿ, ಕರ್ನಾಟಕ ಸರ್ಕಾರ ಇವರನ್ನು ಏಕ ಸದಸ್ಯ 5ನೇ ರಾಜ್ಯ ವೇತನ ಆಯೋಗದ ಅಧ್ಯಕ್ಷರನ್ನಾಗಿ ನೇಮಕ ಮಾಡಲು ಹರ್ಷಿಸುತ್ತದೆ. ಆಯೋಗದ ಪರಿಶೀಲನಾರ್ಹ ಅಂಶಗಳು ಸರ್ಕಾರದ ಆದೇಶ ಸಂಖ್ಯೆ: ಆಇ 11 ಎಸ್‌ಆರ್‌ಪಿ 2003 ದಿನಾಂಕ:21ನೇ ಜೂನ್ 2005ರಲ್ಲಿ ಸೂಚಿಸಿರುವಂತೆ ಇರುತ್ತವೆ.

ಆಯೋಗವು ತನ್ನ ವರದಿಯನ್ನು ದಿನಾಂಕ:31.12.2006 ರಂದು ಅಥವಾ ಅದಕ್ಕಿಂತ ಮುಂಚಿತವಾಗಿ ಸಲ್ಲಿಸುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎನ್. ಗೋಕುಲ್ ರಾಂ**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರ್ಥಿಕ ಇಲಾಖೆ.

ಪಿ.ಆರ್. 1190

## ಸಹಕಾರ ಸಚಿವಾಲಯ

**ವಿಷಯ:** ರೂ.25.00 ಕೋಟಿ ಮೀರಿ ಠೇವಣಿ ಹೊಂದಿರುವ ಪಟ್ಟಣ ಸಹಕಾರ ಬ್ಯಾಂಕುಗಳ ಶಾಸನ ಬದ್ಧ ಲೆಕ್ಕಪರಿಶೋಧನೆ ಚಾರ್ಟರ್ಡ್ ಅಕೌಂಟೆಂಟರುಗಳಿಂದ ಕೈಗೊಳ್ಳುವುದಕ್ಕೆ ಶುಲ್ಕ ನಿಗದಿಪಡಿಸುವ ಬಗ್ಗೆ.

**ಓದಲಾಗಿದೆ:** ಸಹಕಾರ ಸಂಘಗಳ ಲೆಕ್ಕಪರಿಶೋಧನಾ ನಿರ್ದೇಶಕರ ಪತ್ರ ಸಂಖ್ಯೆ: ಲೆಪಶಾ: ಪಸಬ್ಯಾಂಕ್:7:2005-06, ದಿನಾಂಕ:24.03.2006 ಹಾಗೂ ಎಡಿಎಫ್:ಪಟ್ಟಣಬ್ಯಾಂಕ್: ಸಿ.ಎ. ಸಂಭಾವನೆ:13:2006-07, ದಿನಾಂಕ:06.06.2006.

**ಪ್ರಸ್ತಾವನೆ:**

ದಿನಾಂಕ: 05.09.2005ರಂದು ಕರ್ನಾಟಕ ರಾಜ್ಯ ಸರ್ಕಾರ ಹಾಗೂ ಭಾರತೀಯ ರಿಸರ್ವ್ ಬ್ಯಾಂಕಿನೊಡನೆ ಆಗಿರುವ ಒಡಂಬಡಿಕೆ (Memorandum of Understanding) ಪ್ರಕಾರ ರೂ.25.00 ಕೋಟಿಗಳಿಗಿಂತ ಹೆಚ್ಚಿನ ಠೇವಣಿ ಹೊಂದಿರುವ ಎಲ್ಲಾ ಪಟ್ಟಣ ಸಹಕಾರಿ ಬ್ಯಾಂಕುಗಳ ಶಾಸನಬದ್ಧ ಲೆಕ್ಕಪರಿಶೋಧನೆಯನ್ನು ಭಾರತೀಯ ರಿಸರ್ವ್ ಬ್ಯಾಂಕಿನೊಡನೆ ಸಮಾಲೋಚಿಸಿ ಲೆಕ್ಕಪರಿಶೋಧನಾ ನಿರ್ದೇಶಕರು ನೇಮಕ ಮಾಡುವ ಚಾರ್ಟರ್ಡ್ ಅಕೌಂಟೆಂಡರು ಮಾಡತಕ್ಕದ್ದು ಎಂದಿರುತ್ತದೆ, ಸಹಕಾರ ಸಂಘಗಳ ಲೆಕ್ಕಪರಿಶೋಧನಾ ನಿರ್ದೇಶಕರು ನೇಮಕ ಮಾಡುವ ಚಾರ್ಟರ್ಡ್ ಅಕೌಂಟೆಂಟರಿಗೆ ಪಾವತಿಸಬಹುದಾದ ಲೆಕ್ಕಪರಿಶೋಧನಾ ಶುಲ್ಕ/ ಸಂಭಾವನೆಯನ್ನು ಪಾವತಿಸಲು ಸದರಿ ಉದ್ದೇಶಕ್ಕಾಗಿ ವರ್ಷಾಂತ್ಯದ ಠೇವಣಿ ಮೊಬಲಗನ್ನು ಆಧರಿಸಿ ಪಟ್ಟಣ ಸಹಕಾರ ಬ್ಯಾಂಕುಗಳನ್ನು 03 ಪ್ರವರ್ಗಗಳಲ್ಲಿ ವಿಂಗಡಿಸಿ ಅವುಗಳ ಚಾರ್ಟರ್ಡ್ ಅಕೌಂಟೆಂಟರಿಗೆ ಪಾವತಿಸಬಹುದಾದ ಲೆಕ್ಕಪರಿಶೋಧನಾ ಶುಲ್ಕ/ ಸಂಭಾವನೆ ಮೊಬಲಗನ್ನು ಕೆಳಕಂಡ ಕೋಷ್ಟಕದಂತೆ ನಿಗದಿಪಡಿಸಬಹುದೆಂದು ಸಹಕಾರ ಸಂಘಗಳ ಲೆಕ್ಕಪರಿಶೋಧನಾ ನಿರ್ದೇಶಕರು ಮೇಲೆ ಓದಲಾದ ಪತ್ರದಲ್ಲಿ ಶಿಫಾರಸು ಮಾಡಿದ್ದಾರೆ.

**ಕೋಷ್ಟಕ**

| ಕ್ರ. ಸಂ. | ಪಟ್ಟಣ ಬ್ಯಾಂಕುಗಳ ಪ್ರವರ್ಗ | ಠೇವಣಿ ಮೊಬಲಗು | ಚಾರ್ಟರ್ಡ್ ಅಕೌಂಟೆಂಟರಿಗೆ ಪಾವತಿಸಲು ನಿಗದಿಪಡಿಸಿರುವ ಲೆಕ್ಕಪರಿಶೋಧನಾ ಶುಲ್ಕ/ ಸಂಭಾವನೆ |
|---|---|---|---|
| 1. | I | ರೂ.25.00 ಕೋಟಿಯಿಂದ ರೂ.50.00 ಕೋಟಿಯವರೆಗೆ | ರೂ.1.50 ಲಕ್ಷಗಳು |
| 2. | II | ರೂ.50.00 ಕೋಟಿ ಮೇಲ್ಪಟ್ಟು ರೂ.100.00 ಕೋಟಿಗಳವರೆಗೆ | ರೂ.2.00 ಲಕ್ಷಗಳು |
| 3. | III | ರೂ.100.00 ಕೋಟಿ ಮೇಲ್ಪಟ್ಟು | ರೂ.3.50 ಲಕ್ಷಗಳು |

ಮೇಲಿನ ಪ್ರವರ್ಗಗಳ ಪಟ್ಟಣ ಸಹಕಾರ ಬ್ಯಾಂಕುಗಳು ಒಂದಕ್ಕಿಂತ ಹೆಚ್ಚಿನ ಶಾಖೆಗಳನ್ನು ಹೊಂದಿದ್ದಲ್ಲಿ ಶಾಖೆಗಳ ಲೆಕ್ಕಪರಿಶೋಧನಾ ಕೆಲಸ ಮತ್ತು ಕ್ರೋಢೀಕರಣಗೊಳಿಸುವ ಪರಿಶೀಲನಾ ಕಾರ್ಯ ಮುಂತಾದ ಅಂಶಗಳನ್ನು ಪರಿಗಣಿಸಿ ಪ್ರತಿ ಶಾಖೆಗೆ ಮೇಲೆ ನಮೂದಿಸಿರುವ ಲೆಕ್ಕಪರಿಶೋಧನಾ ಸಂಭಾವನೆ/ ಶುಲ್ಕದ ಪ್ರತಿಶತ 7.5ರಂತೆ ಶಾಖೆಗಳ ಸಂಖ್ಯೆಗನುಗುಣವಾಗಿ ಬ್ಯಾಂಕುಗಳು ಹೆಚ್ಚಿನ ಸಂಭಾವನೆಯನ್ನು ಚಾರ್ಟರ್ಡ್ ಅಕೌಂಟೆಂಟರಿಗೆ ನೀಡಬಹುದೆಂದು ಹಾಗೂ ಇದನ್ನು ಹೊರತುಪಡಿಸಿ ಬೇರೆ ಯಾವುದೇ ರೀತಿಯ ಭತ್ಯೆಗಳನ್ನು ನೀಡಬಾರದೆಂದು ಲೆಕ್ಕಪರಿಶೋಧನಾ ನಿರ್ದೇಶಕರು ತಿಳಿಸಿರುತ್ತಾರೆ. ಮೇಲಿನಂತೆ ನಿಗದಿಪಡಿಸಿರುವ ಲೆಕ್ಕಪರಿಶೋಧನಾ ಶುಲ್ಕ/ ಸಂಭಾವನೆಯನ್ನು ಬ್ಯಾಂಕಿನವರು ನೇರವಾಗಿ ಸಂಬಂಧಪಟ್ಟ ಚಾರ್ಟರ್ಡ್ ಅಕೌಂಟೆಂಟರಿಗೆ ಪಾವತಿಸಬಹುದಾದ ಹಾಗೂ ಸದರಿ ಬ್ಯಾಂಕುಗಳ ಲೆಕ್ಕಪರಿಶೋಧನೆಯನ್ನು ನಿರ್ದೇಶಕರ ಮೇಲ್ವಿಚಾರಣೆ, ನಿರ್ದೇಶನ ಹಾಗೂ ನಿಯಂತ್ರಣಗಳಡಿ ನಿರ್ವಹಿಸಬೇಕಾಗಿರುವುದರಿಂದ ಪ್ರತಿ ಪಟ್ಟಣ ಸಹಕಾರ ಬ್ಯಾಂಕು ಪ್ರತಿ ವರ್ಷ ಸರ್ಕಾರಕ್ಕೆ ಸೇವಾ ಶುಲ್ಕದ ರೂಪದಲ್ಲಿ ರೂ.10,000.00 (ಹತ್ತು ಸಾವಿರ ರೂಪಾಯಿಗಳು ಮಾತ್ರ) ಗಳನ್ನು ಪಾವತಿಸಬೇಕೆಂದು ಪ್ರಸ್ತಾಪಿಸಿದ್ದಾರೆ.

ಸಹಕಾರ ಸಂಘಗಳ ಲೆಕ್ಕಪರಿಶೋಧನಾ ನಿರ್ದೇಶಕರ ಪ್ರಸ್ತಾವವನ್ನು ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶದ ಸಂಖ್ಯೆ: ಸಿಒ 82 ಸಿಎಲ್ಎಂ 2006, ಬೆಂಗಳೂರು, ದಿನಾಂಕ: 12ನೇ ಜುಲೈ, 2006**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ರಾಜ್ಯ ಸರ್ಕಾರ ಮತ್ತು ಭಾರತೀಯ ರಿಸರ್ವ್ ಬ್ಯಾಂಕಿನೊಡನೆ ದಿನಾಂಕ:05.09.2005 ರಂದು ಆಗಿರುವ ಒಡಂಬಡಿಕೆಯಂತೆ ಸಹಕಾರ ಸಂಘಗಳ ಲೆಕ್ಕಪರಿಶೋಧನಾ ನಿರ್ದೇಶಕರ ಮೇಲ್ವಿಚಾರಣೆ ಮತ್ತು ನಿಯಂತ್ರಣದಲ್ಲಿ ರೂ.25.00 ಕೋಟಿಗಿಂತ ಮೀರಿ ಠೇವಣಿ ಹೊಂದಿರುವ ಪಟ್ಟಣ ಸಹಕಾರ ಬ್ಯಾಂಕುಗಳ ಶಾಸನಬದ್ಧ ಲೆಕ್ಕಪರಿಶೋಧನೆಯನ್ನು ಮಾಡುವ ಚಾರ್ಟರ್ಡ್ ಅಕೌಂಟೆಂಟರುಗಳಿಗೆ ಕೆಳಕಂಡ ಕೋಷ್ಟಕದಲ್ಲಿ ತಿಳಿಸಿರುವಂತೆ 2006-07ನೇ ಸಾಲಿನಿಂದ ಜಾರಿಗೆ ಬರುವಂತೆ ಲೆಕ್ಕ ಪರಿಶೋಧನಾ ಶುಲ್ಕ ಸಂಭಾವನೆಯನ್ನು ಪಾವತಿಸಲು ಸರ್ಕಾರದ ಮಂಜೂರಾತಿಯನ್ನು ನೀಡಲಾಗಿದೆ.

**ಕೋಷ್ಟಕ**

| ಕ್ರ. ಸಂ. | ಪಟ್ಟಣ ಬ್ಯಾಂಕುಗಳ ಪ್ರವರ್ಗ | ಠೇವಣಿ ಮೊಬಲಗು | ಚಾರ್ಟರ್ಡ್ ಅಕೌಂಟೆಂಟರಿಗೆ ಪಾವತಿಸಲು ನಿಗದಿಪಡಿಸಿರುವ ಲೆಕ್ಕಪರಿಶೋಧನಾ ಶುಲ್ಕ/ ಸಂಭಾವನೆ |
|---|---|---|---|
| 1. | I | ರೂ.25.00 ಕೋಟಿಯಿಂದ ರೂ.50.00 ಕೋಟಿಯವರೆಗೆ | ರೂ.1.50 ಲಕ್ಷಗಳು |
| 2. | II | ರೂ.50.00 ಕೋಟಿ ಮೇಲ್ಪಟ್ಟು ರೂ.100.00 ಕೋಟಿಗಳವರೆಗೆ | ರೂ.2.00 ಲಕ್ಷಗಳು |
| 3. | III | ರೂ.100.00 ಕೋಟಿ ಮೇಲ್ಪಟ್ಟು | ರೂ.3.50 ಲಕ್ಷಗಳು |

**ಷರತ್ತುಗಳು:**

1. ಚಾರ್ಟರ್ಡ್ ಅಕೌಂಟೆಂಡರುಗಳು ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಮತ್ತು ನಿಯಮಗಳು 1960ರ ಪ್ರಕಾರ ಲೆಕ್ಕಪರಿಶೋಧನೆಯನ್ನು ನಿರ್ವಹಿಸತಕ್ಕದ್ದು.
2. ಪಟ್ಟಣ ಸಹಕಾರ ಬ್ಯಾಂಕುಗಳು ಮೇಲೆ ತಿಳಿಸಿದ ಲೆಕ್ಕಪರಿಶೋಧನಾ ಶುಲ್ಕ/ ಸಂಭಾವನೆಯನ್ನು ನೇರವಾಗಿ ಚಾರ್ಟರ್ಡ್ ಅಕೌಂಟೆಂಟರಿಗೆ ಪಾವತಿಸತಕ್ಕದ್ದು.
3. ಮೇಲಿನ ಪ್ರವರ್ಗಗಳ ಪಟ್ಟಣ ಸಹಕಾರ ಬ್ಯಾಂಕುಗಳು ಒಂದಕ್ಕಿಂತ ಹೆಚ್ಚಿನ ಶಾಖೆಗಳನ್ನು ಹೊಂದಿದ್ದಲ್ಲಿ ಶಾಖೆಗಳ ಲೆಕ್ಕಪರಿಶೋಧನಾ ಕೆಲಸ ಮತ್ತು ಕ್ರೋಢೀಕರಣಗೊಳಿಸುವ ಪರಿಶೀಲನಾ ಕಾರ್ಯ ಮುಂತಾದ ಅಂಶಗಳನ್ನು ಪರಿಗಣಿಸಿ ಪ್ರತಿ ಶಾಖೆಗೆ ಮೇಲೆ ನಮೂದಿಸಿರುವ ಲೆಕ್ಕಪರಿಶೋಧನಾ ಸಂಭಾವನೆ/ ಶುಲ್ಕದ ಪ್ರತಿಶತ 7.5 ರಂತೆ ಶಾಖೆಗಳ ಸಂಖ್ಯೆಗನುಗುಣವಾಗಿ ಬ್ಯಾಂಕುಗಳು ಹೆಚ್ಚಿನ ಸಂಭಾವನೆಯನ್ನು ಚಾರ್ಟರ್ಡ್ ಅಕೌಂಟೆಂಟರಿಗೆ ನೇರವಾಗಿ ಪಾವತಿಸತಕ್ಕದ್ದು. ಇದನ್ನು ಹೊರತುಪಡಿಸಿ ದಿನಭತ್ಯೆ, ಪ್ರವಾಸಭತ್ಯೆ ಹಾಗೂ ಇತರೆ ಯಾವುದೇ ರೀತಿಯ ಭತ್ಯೆಯನ್ನು ಪಡೆಯಲು ಅರ್ಹರಿರುವುದಿಲ್ಲ.
4. ಸದರಿ ಚಾರ್ಟರ್ಡ್ ಅಕೌಂಟೆಂಟರುಗಳು ಸಹಕಾರ ಸಂಘಗಳ ಲೆಕ್ಕಪರಿಶೋಧನಾ ನಿರ್ದೇಶಕರ ಮೇಲ್ವಿಚಾರಣೆ, ನಿರ್ದೇಶನ ಮತ್ತು ನಿಯಂತ್ರಣಗಳಡಿ ಕೆಲಸ ನಿರ್ವಹಿಸತಕ್ಕದ್ದು.
5. ಪ್ರತಿ ಪಟ್ಟಣ ಸಹಕಾರ ಬ್ಯಾಂಕ್ ಪ್ರತಿ ವರ್ಷ ಸರ್ಕಾರಕ್ಕೆ ಸೇವಾ ಶುಲ್ಕದ ರೂಪದಲ್ಲಿ ರೂ.10,000-00 ಗಳನ್ನು ಲೆಕ್ಕಶೀರ್ಷಿಕೆ: ಸಹಕಾರ ಸಂಘಗಳ ಲೆಕ್ಕಪರಿಶೋಧನೆ ಇಲಾಖೆಯ ಇತರೆ ಜಮೆ (other receipts) ಉಪಲೆಕ್ಕಶೀರ್ಷಿಕೆಯಡಿ ಜಮಾ ಮಾಡತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎಸ್. ಹುಚ್ಚಾಚಾರಿ**

ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ,
ಸರ್ಕಾರದ ಜಂಟಿ ಕಾರ್ಯದರ್ಶಿ,
ಸಹಕಾರ ಇಲಾಖೆ.

ಪಿ.ಆರ್. 1192

**ವಿಷಯ:** ದಿ ಮರಾಠ ಸಹಕಾರ ಬ್ಯಾಂಕ್ ನಿಯಮಿತ, ಹುಬ್ಬಳ್ಳಿ ಇದರ ವಿಚಾರಣಾಧಿಕಾರಿಯ ಅವಧಿಯನ್ನು ವಿಸ್ತರಿಸುವ ಬಗ್ಗೆ.

**ಓದಲಾಗಿದೆ:** ಸಹಕಾರ ಸಂಘಗಳ ನಿಬಂಧಕರ ಪತ್ರಸಂಖ್ಯೆ: ಯುಬಿಸಿ-5/ 111/ ಯುಎಂಸಿ/ 2003-2004, ದಿನಾಂಕ:11.05.2006.

**ಪ್ರಸ್ತಾವನೆ:**

ದಿ ಮರಾಠ ಸಹಕಾರ ಬ್ಯಾಂಕ್ ನಿಯಮಿತ, ಹುಬ್ಬಳ್ಳಿ ಇದಕ್ಕೆ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 64ರಡಿ ದಿನಾಂಕ:05.11.2003ರಂದು ಸಹಕಾರ ಸಂಘಗಳ ಸಹಾಯಕ ನಿಬಂಧಕರು (ಲೇವಾದೇವಿ), ಧಾರವಾಡ ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಕ ಮಾಡಿದ್ದು ಮೂರು ತಿಂಗಳೊಳಗೆ ವರದಿಯನ್ನು ಸಲ್ಲಿಸುವಂತೆ ಆದೇಶಿಸಲಾಗಿತ್ತೆಂದೂ ಅನಂತರ ಸಹಕಾರ ಸಂಘಗಳ ನಿಬಂಧಕರು ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 64(2ಎ) ರಡಿ ಸದರಿ ಅವಧಿಯನ್ನು ದಿನಾಂಕ:04.05.2005ರ ವರೆಗೆ ವಿಸ್ತರಿಸುತ್ತಾರೆಂದೂ ವಿಚಾರಣಾಧಿಕಾರಿಯವರು ಈ ಅವಧಿಯಲ್ಲಿ ವಿಚಾರಣಾ ವರದಿಯನ್ನು ಸಲ್ಲಿಸದೆ ಇದ್ದುದ್ದರಿಂದ ಸದರಿಯವರಿಗೆ ಕಾರಣ ಕೇಳುವ ನೋಟಿಸನ್ನು ಜಾರಿ ಮಾಡಲಾಗಿದ್ದು ಸದರಿಯವರು ತಾವು ದಿನಾಂಕ:31.07.2005ರಂದು ಸಹಕಾರ ಸಂಘಗಳ ಸಹಾಯಕ ನಿಬಂಧಕರು (ಲೇವಾದೇವಿ), ಧಾರವಾಡ ಈ ಹುದ್ದೆಯ ಹೆಚ್ಚುವರಿ ಪ್ರಭಾರವನ್ನು ವಹಿಸಿಕೊಂಡಿದ್ದು ತಮ್ಮ ಮೂಲ ಹುದ್ದೆಯಾದ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಧಾರವಾಡ ಉಪವಿಭಾಗ, ಧಾರವಾಡ ಈ ಹುದ್ದೆಯ ಕೆಲಸದ ಒತ್ತಡಗಳ ಹಿನ್ನೆಲೆಯಲ್ಲಿ ಮೇಲ್ಕಂಡ ವಿಚಾರಣೆಯನ್ನು ನಿಗದಿತ ಅವಧಿಯೊಳಗೆ ಪೂರೈಸಿ ವರದಿಯನ್ನು ಸಲ್ಲಿಸಲು ಸಾಧ್ಯವಾಗಿರುವುದಿಲ್ಲವೆಂದು ತಿಳಿಸಿ ಬೇರೆ ಅಧಿಕಾರಿಯವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸುವಂತೆ ವಿನಂತಿಸಿದ ಮೇರೆಗೆ ಶ್ರೀ ಎಸ್.ಬಿ. ಶಿವಪುರ್, ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿರಸಿ ಉಪವಿಭಾಗ, ಶಿರಸಿ, ಉತ್ತರ ಕನ್ನಡ ಜಿಲ್ಲೆ ಇವರನ್ನು ಪ್ರಕರಣ 64ರ ವಿಚಾಣಾಧಿಕಾರಿಗಳೆಂದು ನೇಮಕಾತಿ ಮಾಡಿ ದಿನಾಂಕ:30.06.2006ರೊಳಗೆ ವಿಚಾರಣಾ ವರದಿಯನ್ನು ಸಲ್ಲಿಸುವಂತೆ ಸೂಚಿಸಿರುವುದಾಗಿಯೂ ತಿಳಿಸಿ ಇದೊಂದು ವಿಶೇಷ ಪ್ರಕರಣವೆಂದು ಪರಿಗಣಿಸಿ ದಿ ಮರಾಠ ಸಹಕಾರಿ ಬ್ಯಾಂಕ್ ನಿಯಮಿತ, ಹುಬ್ಬಳ್ಳಿ ಇದರ ವಿಚಾರಣಾಧಿಕಾರಿಯ ಅವಧಿಯನ್ನು ದಿನಾಂಕ:30.06.2006 ವಿಸ್ತರಿಸುವಂತೆ ಸಹಕಾರ ಸಂಘಗಳ ನಿಬಂಧಕರು ಮೇಲೆ ಓದಲಾದ (1)ರ ಪತ್ರದಲ್ಲಿ ಕೋರಿರುತ್ತಾರೆ.

ಸಹಕಾರ ಸಂಘಗಳ ನಿಬಂಧಕರ ಪ್ರಸ್ತಾವೆಯನ್ನು ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಒ 119 ಸಿಎಲ್‌ಎಂ 2006, ಬೆಂಗಳೂರು, ದಿನಾಂಕ:12ನೇ ಜುಲೈ, 2006**

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ, 1959ರ ಪ್ರಕರಣ 121ರ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು, ದಿ ಮರಾಠ ಸಹಕಾರ ಬ್ಯಾಂಕ್ ನಿಯಮಿತ, ಹುಬ್ಬಳ್ಳಿ ಇದರ ವಿಚಾರಣಾಧಿಕಾರಿ ಅವಧಿಯನ್ನು ದಿನಾಂಕ:30.06.2006 ರವರೆಗೆ ವಿಸ್ತರಿಸಲು ಅನುವಾಗುವಂತೆ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 64(2ಎ)ರ ಉಪಬಂಧಗಳು ಈ ಕೆಳಗಿನ ಮಾರ್ಪಾಡಿನೊಂದಿಗೆ ಅನ್ವಯವಾಗತಕ್ಕದ್ದು ಎಂದು ನಿರ್ದೇಶಿಸುತ್ತದೆ, ಎಂದರೆ:

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ, 1959ರ ಪ್ರಕರಣ 64ರ ಉಪ-ಪ್ರಕರಣ (2ಎ) ದಲ್ಲಿನ "ಆರು ತಿಂಗಳು" ಎಂಬ ಪದಗಳಿಗೆ ಬದಲಾಗಿ "ಇಪ್ಪತ್ತು ತಿಂಗಳು" ಎಂಬ ಪದಗಳನ್ನು ಪ್ರತ್ಯಾಯೋಜಿಸತಕ್ಕದ್ದು.

**ಸೂಚನೆ:**

ಪ್ರಕರಣ 64ರ ಉಪ-ಪ್ರಕರಣ (2ಎ)ಗೆ ಮಾಡಿದ ಈ ಮಾರ್ಪಾಡು ದಿನಾಂಕ:30.06.2006 ರವರೆಗೆ ಜಾರಿಯಲ್ಲಿರತಕ್ಕದ್ದು. ಈ ಅವಧಿಯು ಮುಗಿದ ನಂತರ ಈ ಆದೇಶದ ಮಾರ್ಪಾಡಿಗೆ ಮೊದಲು ಜಾರಿಯಲ್ಲಿದ್ದಂತೆ ಸದರಿ ಪ್ರಕರಣ 64ರ ಉಪ-ಪ್ರಕರಣ (2ಎ)ರಲ್ಲಿನ ಉಪಬಂಧಗಳು ಪುನಃ ಜಾರಿಗೆ ಬರತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎಸ್. ಹುಚ್ಚಾಚಾರಿ**

ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ,

ಸರ್ಕಾರದ ಜಂಟಿ ಕಾರ್ಯದರ್ಶಿ, ಸಹಕಾರ ಇಲಾಖೆ.

ಪಿ.ಆರ್. 1193

**ಶಿಕ್ಷಣ ಸಚಿವಾಲಯ**

**ತಿದ್ದುಪಡಿ**

**ಸಂಖ್ಯೆ: ಇಡಿ 122 ಟಿಪಿಯು 2005, ಬೆಂಗಳೂರು, ದಿನಾಂಕ:2ನೇ ಆಗಸ್ಟ್, 2006**

ಸರ್ಕಾರಿ ಆದೇಶ ಸಂಖ್ಯೆ: ಇಡಿ 4 ಟಿಪಿಯು 2002ರ ಅನುಬಂಧದಲ್ಲಿಯ ದಿನಾಂಕ:20.09.2004ಕ್ಕೆ ಬದಲಾಗಿ ದಿನಾಂಕ:30.12.2004 ಎಂದು ಹಾಗೂ ಅನುಬಂಧದ

1. ಐಟಂ- ಬಿ ಕ್ರಮಸಂಖ್ಯೆ: 7ರಲ್ಲಿ 'ಸ್ಪೋರ್ಸ್‌ಶುಲ್ಕ' ಎಂಬುದರ ಬದಲಾಗಿ 'ಸ್ಪೋರ್ಟ್ಸ್' ಶುಲ್ಕ (Sports fee) ಎಂದು ಓದಿಕೊಳ್ಳತಕ್ಕದ್ದು.

2. ಐಟಂ- ಐ ಕ್ರಮಸಂಖ್ಯೆ: (3)ರಲ್ಲಿ ಮರು ಮೌಲ್ಯಮಾಪನ ಶುಲ್ಕ 'ಒಂದು ವಿಷಯಕ್ಕೆ' ಎಂದು ಸೇರಿಸಿ ಓದಿಕೊಳ್ಳತಕ್ಕದ್ದು.

**ಶುಲ್ಕ ದರಗಳ ಹೆಚ್ಚಳಕ್ಕೆ ಸಂಬಂಧಿಸಿದಂತೆ**

| ಸರ್ಕಾರಿ ಆದೇಶ ಐಟಂ ಸಂಖ್ಯೆ | ಕ್ರಮಸಂಖ್ಯೆ | ವಿವರ | ಚಾಲ್ತಿಯಲ್ಲಿರುವ ಹಾಲಿದರ | ಪರಿಷ್ಕರಿಸಿ ನಿಗಧಿಪಡಿಸಿದ ದರ |
|---|---|---|---|---|
| ಬಿ | 7 | ಬೋಧನಾ ಶುಲ್ಕ ಖಾಸಗಿ ಪದವಿ ಪೂರ್ವ ಕಾಲೇಜುಗಳು | 500-00 | 600-00 |
| ಐ | 1 | ಪ್ರಥಮ ಪಿಯುಸಿ ಪರೀಕ್ಷಾ ಶುಲ್ಕ ಕ್ಲಾಸ್ ಎಕ್ಸಾಮ್ | 60-00 | 100-00 |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸಿದ್ಧಲಿಂಗಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ,

ಶಿಕ್ಷಣ ಇಲಾಖೆ.

ಪಿ.ಆರ್. 1194

## INFRASTRUCTURE DEVELOPMENT SECRETARIAT

**Sub:** Fee for Review of Project Cost of BIAP by iDeCK.

**Read:** 1. G.O. No. IDD 3 DIA 05, Dated:28.03.2005.
2. G.O. No. IDD 47 NSW 04, Dated:29.03.2005.
3. G.O. No.IDD 36 DIA 05, Dated:28.06.2005.
4. iDeCK letter No. iDeCK/ 2006-07/ 033, Dated:17.04.2006.
5. Notification No. PWD 32 FC III/2006, Dated:18.01.2006 and 15.03.2006.
6. iDeCK letter No. iDeCK/ 2006-07/ 166, Dated:17.05.2006.

**Preamble:**

In G.O. read at Sl.Nos.1, 2 and 3 above Government had released a sum of Rs.9.5 lakhs towards the fees for advisory services to iDeCK for evaluation of cost escalation of Bangalore International Airport Project.

iDeCK in its letter Dated:17.04.2006 read at Sl.No.4 had sent a revised proposal of terms for fees for review of cost escalation of Bangalore International Airport Project for implementation period, in conformity with Finance Department's Notification exempting the procurement of the services of iDeCK by Infrastructure Development Department in regard to Bangalore International Airport Project from the operation of KTPP Act, read at Sl.No.5 above. Further in letter Dated:17.05.2006 read at Sl.No.7 above iDeCK has sent invoices for payment of 1) Fees on commissioning of the evaluation study of Rs.2.5 lakhs & 2) Fees on submission of project Cost Review Report for the quarter ended March, 2006- Rs.4.9 lakhs. The proposal has been further examined. Hence this order.

**Government Order No. IDD 110 DIA 2005, Bangalore, Dated:9th August, 2006**

1. After careful examination Government are pleased to release a total amount of Rs.7.4 lakhs (Seven lakhs Forty thousand only) towards the following 1) Rs.2.5 lakhs for fee on issue of letter of Appointment 2) Rs.4.90 lakhs for fee for Project Cost Review Report for the quarter ending March 2006 to iDeCK. This is inclusive of service Tax of 12.24%.

2. This cost would be met out of the funds available under the Head of Account 3451-00-090-1-06-125- Infrastructure Preliminary Studies- Modernisation (Plan) 2006-07.

3. The Chief Financial Officer, iDeCK would draw this amount on a payee's receipt duly countersigned by the Under Secretary to Government, Infrastructure Development Department.

This order is issued in accordance with G.O. No. FD 1 TFP 2003 Dated:12.06.2003.

By order and in the name of the Governor of Karnataka,
**N. MANJULA GEETHA**
Under Secretary to Government,
Infrastructure Development Department.

PR-1195

## ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ

**ವಿಷಯ:** ವಿವಿಧ ಇಲಾಖೆಗಳ ಸರ್ಕಾರಿ ನೌಕರರಿಗೆ ಆಡಳಿತ ಕನ್ನಡ ಕಾರ್ಯಶಿಬಿರ ನಡೆಸಲು ಕನ್ನಡ ಮತ್ತು ಸಂಸ್ಕೃತಿ ಇಲಾಖೆಗೆ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ಸಂಕಇ 60 ಸ್ವೀಮರ 2006 ದಿನಾಂಕ:07.04.2006.
2) ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಬೆಂಗಳೂರು ಅವರ ಪತ್ರ ಸಂಖ್ಯೆ: ಕಸನಿ/ 13/ ಕ 2006-07 ದಿನಾಂಕ:13.06.2006.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ದಿನಾಂಕ:07.04.2006ರ ಸರ್ಕಾರಿ ಆದೇಶದಲ್ಲಿ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯಿಂದ ಸರ್ಕಾರಿ ನೌಕರರ ಆಡಳಿತ ಕನ್ನಡ ಕಾರ್ಯಶಿಬಿರ ನಡೆಸಲು 2006-07ನೇ ಸಾಲಿಗೆ 1,50,000/- ರೂ.ಗಳನ್ನು ನಿಗದಿಪಡಿಸಲಾಗಿದೆ. ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು ಅವರು ಮೇಲೆ (2)ರಲ್ಲಿ ಓದಲಾದ ದಿನಾಂಕ:13.06.2006ರ ಪತ್ರದಲ್ಲಿ ಇಲಾಖೆಯ ವ್ಯಾಪ್ತಿಯಲ್ಲಿ ಬರುವ 3 ವಲಯಗಳಲ್ಲಿ ಶಿಬಿರ ನಿರ್ದೇಶಕರ ಕಾರ್ಯಶಿಬಿರವನ್ನು ನಡೆಸಲು ವಲಯ ಒಂದಕ್ಕೆ 50,000/-ಗಳಂತೆ 3 ವಲಯಗಳಿಗೆ ಒಟ್ಟು 1,50,000/ ರೂ.ಗಳನ್ನು ಬಿಡುಗಡೆ ಮಾಡುವಂತೆ ಕೋರಿದ್ದಾರೆ. ಇದನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಆದೇಶ ಸಂಖ್ಯೆ: ಸಂಕಇ 64 ಕಸನಿ 2006, ಬೆಂಗಳೂರು, ದಿನಾಂಕ:5ನೇ ಆಗಸ್ಟ್, 2006**

ಕನ್ನಡ ಮತ್ತು ಸಂಸ್ಕೃತಿ ಇಲಾಖೆ ವತಿಯಿಂದ 2006-07ನೇ ಸಾಲಿನಲ್ಲಿ ಸರ್ಕಾರಿ ನೌಕರರ ಆಡಳಿತ ಕನ್ನಡ ಕಾರ್ಯಶಿಬಿರದ ಶಿಬಿರ ನಿರ್ದೇಶಕರ ಕಾರ್ಯಶಿಬಿರವನ್ನು ವಲಯ ಒಂದಕ್ಕೆ 50,000/- ರೂ.ಗಳಂತೆ ಒಟ್ಟು 3 ವಲಯಗಳಿಗೆ 1,50,000/- ರೂ.ಗಳ ವೆಚ್ಚದಲ್ಲಿ ನಡೆಸಲು ಈ ಮೂಲಕ ಸರ್ಕಾರದ ಮಂಜೂರಾತಿ ನೀಡಲಾಗಿದೆ.

ಈ ಸಂಬಂಧದ ವೆಚ್ಚವನ್ನು 2006-07ನೇ ಸಾಲಿನ ಲೆಕ್ಕಶೀರ್ಷಿಕೆ 2205-00-001-0-01-059 (ಯೋಜನೆ) ರಡಿಯಲ್ಲಿ ಭರಿಸತಕ್ಕದ್ದು.

ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಆಂತರಿಕ ಆರ್ಥಿಕ ಸಲಹೆಗಾರರ ಸಹಮತಿಯನ್ನು ಅನಧಿಕೃತ ಟಿಪ್ಪಣಿ ಸಂಖ್ಯೆ: 602 ಐಎಫ್ (ಬಿಎ) 2006 ದಿನಾಂಕ:26.07.2006ರಲ್ಲಿ ಪಡೆದು ಈ ಆದೇಶವನ್ನು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ.ಎಸ್. ಶಿವರಾಮ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು
ಪ್ರವಾಸೋದ್ಯಮ ಇಲಾಖೆ (ಆಡಳಿತ ಕನ್ನಡ).

ಪಿ.ಆರ್. 1196

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಸಿ. ಶಂಕರೇಗೌಡ, ಸರ್ಕಾರಿ ಅಭಿಯೋಜಕರು, ಇವರ ವಿರುದ್ಧ ಇಲಾಖಾ ವಿಚಾರಣೆಯ ಬಗ್ಗೆ.

**ಓದಲಾಗಿದೆ:** 1. ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶಕರು ಇಲಾಖೆ ಇವರ ಪತ್ರ ಸಂಖ್ಯೆ: ಡಿಪಿಎನ್: ಲೆಕ್ಕ-1/ 112/ 2000-01 ದಿನಾಂಕ:16.01.2003.

2. ಕಾರಣ ಕೇಳುವ ತಿಳುವಳಿಕೆ ಪತ್ರ ಸಂಖ್ಯೆ: ಲಾ 102 ಪಿಪಿಇ 2002 ದಿನಾಂಕ: 24.02.2003.

3. ಸರ್ಕಾರಿ ಆದೇಶ ಸಂಖ್ಯೆ: ಲಾ 102 ಪಿಪಿಇ 2002 ದಿನಾಂಕ:16.04.2003.

4. ಸರ್ಕಾರಿ ಪತ್ರ ಸಂಖ್ಯೆ: ಲಾ 102 ಪಿಪಿಇ 02 ದಿನಾಂಕ:16.10.2003.

5. ವಿಚಾರಣಾಧಿಕಾರಿಯವರ ವಿಚಾರಣಾ ವರದಿ ದಿನಾಂಕ:17.01.2004.

6. 2ನೇ ಕಾರಣ ಕೇಳುವ ತಿಳುವಳಿಕೆ ಪತ್ರ ಸಂಖ್ಯೆ: ಒಇ 26 ಪಿಪಿಇ 2005 ದಿನಾಂಕ:23.02.2004.

7. ಆರೋಪಿತ ಅಧಿಕಾರಿಯ ಸಮಜಾಯಿಷಿ ಪತ್ರ ದಿನಾಂಕ: 18.03.2004.

**ಪ್ರಸ್ತಾವನೆ:**

ಶ್ರೀ ಸಿ. ಶಂಕರೇಗೌಡ, ಸರ್ಕಾರಿ ಅಭಿಯೋಜಕರು, ಮಂಡ್ಯ ಇವರಿಗೆ ರೂ.1,50,000/- ಗಳನ್ನು ಕಾರು ಖರೀದಿ ಮಾಡಲು ಮುಂಗಡವನ್ನು ಪಡೆದ 1 ತಿಂಗಳೊಳಗಾಗಿ ಹೊಸ ವಾಹನವನ್ನು ಅಧಿಕೃತ ಮಾರಾಟಗಾರರಿಂದ ಖರೀದಿಸಿ, ವಾಹನವನ್ನು ಖರೀದಿಸಿದ ಒಂದು ತಿಂಗಳ ಒಳಗೆ ಅಥವಾ ಮುಂಗಡವನ್ನು ಪಡೆದ 2 ತಿಂಗಳ ಒಳಗಾಗಿ ಇವುಗಳಲ್ಲಿ ಯಾವುದು ಮೊದಲೋ ಅದರ ಒಳಗಡೆ ವಾಹನ ಖರೀದಿ ನೊಂದಣಿ ಮಾಡಿಸಿದ ಬಗ್ಗೆ ಸಂಬಂಧಪಟ್ಟ ದಾಖಲೆಗಳನ್ನು ಸಲ್ಲಿಸುವ ಷರತ್ತಿಗೊಳಪಟ್ಟು ಮುಂಗಡ ಹಣವನ್ನು ಮಂಜೂರುಮಾಡಲಾಗಿತ್ತು. ಮುಂಗಡ ಪಡೆದ ಸರ್ಕಾರಿ ನೌಕರನು ಕಾರು ಖರೀದಿ ನೊಂದಣಿ ಪುಸ್ತಕವನ್ನು ಹಾಜರು ಪಡಿಸಲು ತಪ್ಪಿದಲ್ಲಿ ಇಡೀ ಮುಂಗಡದ ಮೇಲೆ ಮುಂಗಡ ಪಡೆದ ದಿನಾಂಕದಿಂದ ನೊಂದಣಿ ಪುಸ್ತಕವನ್ನು ಹಾಜರು ಪಡಿಸಿದ ದಿನಾಂಕದವರೆಗೆ ದಂಡರೂಪದ ಬಡ್ಡಿಯನ್ನು ಪಾವತಿ ಮಾಡಬೇಕಿರುತ್ತದೆ. ಆದರೆ ಸದರಿ ಅಧಿಕಾರಿಯು ಇದಕ್ಕೆ ತಪ್ಪಿರುತ್ತಾರೆ. ಮೇಲೆ ಕ್ರಮಾಂಕ 1ರಲ್ಲಿ ಓದಲಾದ ಪತ್ರದಲ್ಲಿ ಈ ಸಂಬಂಧ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಮೇಲೆ (2)ರಲ್ಲಿ ಓದಲಾಗಿರುವ ದಿನಾಂಕ:24.02.2003ರ ಪತ್ರದಲ್ಲಿ ಶ್ರೀ ಸಿ. ಶಂಕರೇಗೌಡ, ಸರ್ಕಾರಿ ಅಭಿಯೋಜಕರು, ಮಂಡ್ಯ ಇವರಿಗೆ ಕಾರಣ ಕೇಳುವ ತಿಳುವಳಿಕೆ ಪತ್ರದೊಂದಿಗೆ ದೋಷಾರೋಪಣ ಪಟ್ಟಿ ಅನುಬಂಧ-1 ರಿಂದ 4ರ ವರೆಗೆ ಜಾರಿ ಮಾಡಿ ತಮ್ಮ ಮೇಲಿನ ಆಪಾದನೆಗಳನ್ನು ಒಪ್ಪಿಕೊಳ್ಳುವ ಅಥವಾ ನಿರಾಕರಿಸುವ ಬಗ್ಗೆ ಲಿಖಿತ ಹೇಳಿಕೆಯನ್ನು ಸಲ್ಲಿಸುವಂತೆ ತಿಳಿಸಲಾಗಿದ್ದಿತು. ಆದರೆ ಸದರಿ ಅಧಿಕಾರಿಯವರು ನಿಗದಿತ ಅವಧಿಯೊಳಗೆ ಯಾವುದೇ ಲಿಖಿತ ಹೇಳಿಕೆಯನ್ನು ಸಲ್ಲಿಸಿರುವುದಿಲ್ಲ.

ಮೇಲೆ (4)ರಲ್ಲಿ ಓದಲಾಗಿರುವ 16.10.2003ರ ಆದೇಶದಲ್ಲಿ ಆರೋಪಗಳ ಬಗ್ಗೆ ಸತ್ಯಾಸತ್ಯತೆಯನ್ನು ಕಂಡುಕೊಳ್ಳುವ ಸಲುವಾಗಿ ಇಲಾಖಾ ವಿಚಾರಣಾಧಿಕಾರಿಯನ್ನು ನೇಮಿಸಿ ಆದೇಶ ಹೊರಡಿಸಲಾಗಿದೆ.

ಮೇಲೆ (5)ರಲ್ಲಿ ಓದಲಾಗಿರುವ 17.01.2004ರ ಇಲಾಖಾ ವಿಚಾರಣಾ ವರದಿಯಲ್ಲಿ ಆರೋಪಿತ ಸರ್ಕಾರಿ ಅಧಿಕಾರಿಯು ಆಪಾದನೆಗಳನ್ನು ಒಪ್ಪಿಕೊಂಡಿದ್ದು ಸರ್ಕಾರದಿಂದ ಮಂಜೂರಾಗಿದ್ದ ಮುಂಗಡದ ಬಾಕಿ ಮೊತ್ತವನ್ನು ಸರ್ಕಾರಕ್ಕೆ ಮರುಪಾವತಿಸಿರುವ ಬಗ್ಗೆ ಜೆರಾಕ್ಸ್ ಪ್ರತಿಯನ್ನು ವಿಚಾರಣಾ ಸಮಯದಲ್ಲಿ ಹಾಜರುಪಡಿಸಿರುವರೆಂದು ತಿಳಿಸಿ ಸದರಿಯವರ ಮೇಲೆ ಮಾಡಲಾಗಿರುವ ಆರೋಪಗಳಲ್ಲಿ ಭಾಗಶಃ ಆರೋಪಗಳು ದೃಢಪಟ್ಟಿದ್ದು ಕರ್ನಾಟಕ ಸರ್ಕಾರಿ ಸೇವಾ (ನಡತೆ) ನಿಯಮಗಳು 1966ರ ನಿಯಮ 3(i)(iii) ವನ್ನು ಉಲ್ಲಂಘಿಸಿರುವುದು ಸಾಬೀತಾಗಿರುತ್ತದೆ ಎಂದು ವರದಿ ಮಾಡಿರುತ್ತಾರೆ.

ಮೇಲೆ (6)ರಲ್ಲಿ ಓದಲಾಗಿರುವ 23.02.2004ರ 2ನೇ ಕಾರಣ ಕೇಳುವ ತಿಳುವಳಿಕೆ ಪತ್ರದೊಂದಿಗೆ ಇಲಾಖಾ ವಿಚಾರಣಾ ವರದಿಯ ಪ್ರತಿಯನ್ನು ಆರೋಪಿತ ಸರ್ಕಾರಿ ಅಧಿಕಾರಿಗೆ ಒದಗಿಸಿ ಅವರ ಹೇಳಿಕೆಯನ್ನು ನೀಡಲು 15 ದಿನಗಳ ಕಾಲಾವಕಾಶವನ್ನು ನೀಡಲಾಗಿತ್ತು. ಆರೋಪಿತ ಸರ್ಕಾರಿ ಅಧಿಕಾರಿಯು ದಿನಾಂಕ:18.03.2004ರಂದು ತಮ್ಮ ಲಿಖಿತ ಹೇಳಿಕೆಯನ್ನು ಸಲ್ಲಿಸಿ ಈ ಪ್ರಕರಣದಲ್ಲಿ ತಾನು ಯಾವುದೇ ಅನಿಮಿಯತತೆಯನ್ನು ಎಸಗಿರುವುದಿಲ್ಲವೆಂದು ತಿಳಿಸಿ ತಹಲ್‌ವರೆಗಿನ ಬಡ್ಡಿಯೊಂದಿಗೆ ಪೂರ್ಣ ಮುಂಗಡ ಮೊಬಲಗು ಮರುಪಾವತಿಸಿರುವುದಾಗಿ ವಾದಿಸಿರುತ್ತಾರೆ. ತಮ್ಮ ಕೌಟುಂಬಿಕ ಸಮಸ್ಯೆಗಳಿಂದಾಗಿ ಕಾರು ಖರೀದಿ ಮಾಡಲು ಆಗಿರುವುದಿಲ್ಲವೆಂದು ತಿಳಿಸಿರುತ್ತಾರೆ. ಆದರೆ ವಿಚಾರಣಾಧಿಕಾರಿಯವರಿಗೆ ತಪ್ಪು ಮಾಹಿತಿ ನೀಡಿರುವುದನ್ನು ಮತ್ತು ಉನ್ನತಾಧಿಕಾರಿಗಳು, ನೀಡಿದ ನೋಟೀಸಿಗೆ ಉತ್ತರಿಸದೇ ಇರುವುದನ್ನು ಒಪ್ಪಿಕೊಂಡಿರುತ್ತಾರೆ. ಸೇವಾವಧಿಯಲ್ಲಿ ಯಾವ ಕರ್ತವ್ಯಲೋಪ ಎಸಗದಿರುವ ಬಗ್ಗೆ ತಿಳಿಸಿ ತಮ್ಮ ಮೇಲೆ ಯಾವುದೇ ಶಿಕ್ಷೆ ವಿಧಿಸದಿರುವಂತೆ ಕೋರಿರುತ್ತಾರೆ. ಆದ ಕಾರಣ ಸದರಿ ಆರೋಪಿತ ಸರ್ಕಾರಿ ಅಧಿಕಾರಿಯ ಮೇಲೆ ಕರ್ನಾಟಕ ಸರ್ಕಾರ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 8(2)ರಲ್ಲಿ ನಮೂದಿಸಿರುವ ವಾಗ್ದಂಡನೆ ವಿಧಿಸುವ ಬಗ್ಗೆ ನೇಮಕಾತಿ ಪ್ರಾಧಿಕಾರಿ ಮತ್ತು ಶಿಸ್ತಿನ ಪ್ರಾಧಿಕಾರಿಯು ನಿರ್ಣಯಿಸಿರುತ್ತಾರೆ.

ವಿಷಯವನ್ನು ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

### ಸರ್ಕಾರಿ ಆದೇಶ ಸಂಖ್ಯೆ: ಒಇ 300 ಪಿಪಿಇ 2005, ಬೆಂಗಳೂರು, ದಿನಾಂಕ:25ನೇ ಜುಲೈ, 2006

ಶ್ರೀ ಸಿ. ಶಂಕರೇಗೌಡ, ಸರ್ಕಾರಿ ಅಭಿಯೋಜಕರು, ಮಂಡ್ಯ ಇವರ ವಿರುದ್ಧ ಪ್ರಸ್ತಾವನೆಯಲ್ಲಿ ಮಾಡಲಾಗಿರುವ ಆಪಾದನೆಗಳು ಇಲಾಖಾ ವಿಚಾರಣೆಯಲ್ಲಿ ಸಾಕ್ಷ್ಯಾಧಾರಗಳಿಂದ ಸಾಭೀತಾಗಿರುವುದರಿಂದ ಇವರ ವಿರುದ್ಧ ಕರ್ನಾಟಕ ಸರ್ಕಾರ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 8(2)ರಲ್ಲಿ ನಮೂದಿಸಿರುವ ವಾಗ್ದಂಡನೆಯನ್ನು ವಿಧಿಸಿ ಆದೇಶವನ್ನು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ನಿಸಾರ್ ಅಹಮದ್**

ಪಿ.ಆರ್. 1197

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಕಾ. ಮತ್ತು ಸು. ಮತ್ತು ಅಭಿಯೋಗಗಳು).

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ:** ಶ್ರೀ ಎಫ್.ಆರ್. ಸಂಬರಗಿ, ಸರ್ಕಾರದ ಅಧೀನ ಕಾರ್ಯದರ್ಶಿ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ರವರ ವಿರುದ್ಧ ಶಿಸ್ತಿನ ಕ್ರಮ ಕೈಗೊಂಡು ಎಚ್ಚರಿಕೆ ನೀಡಿ ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:** 1. ನೋಟೀಸ್ ಸಂಖ್ಯೆ: ಸಿಆಸುಇ 145 ಎಸ್‌ಇಎನ್ 04, ದಿನಾಂಕ:06.06.2006.

2. ಶ್ರೀ ಎಫ್.ಆರ್. ಸಂಬರಗಿ, ಸರ್ಕಾರದ ಅಧೀನ ಕಾರ್ಯದರ್ಶಿರವರ ದಿನಾಂಕ:28.06.2006ರ ಲಿಖಿತ ಉತ್ತರ.

**ಪ್ರಸ್ತಾವನೆ:**

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆಯ ತಪಾಸಣಾ ತಂಡವು ದಿನಾಂಕ:08.11.2004 ರಿಂದ 20.11.2004ರವರೆಗೆ ಶಿಕ್ಷಣ ಇಲಾಖೆಯ ಸೇವೆಗಳು-1, 2 ಶಾಖೆಯನ್ನು ತಪಾಸಣೆ ಮಾಡಿ ಶ್ರೀ ಎಫ್.ಆರ್. ಸಂಬರಗಿ, ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ (ಸೇವೆಗಳು-1,2) ಅವರಿಂದ ಈ ಕೆಳಕಂಡ ಕಡತಗಳು 5 ದಿನಗಳಿಗಿಂತ ಮೇಲ್ಪಟ್ಟು 57 ದಿನಗಳ ತನಕ ವಿಳಂಬವಾಗಿ ವಿಲೇವಾರಿ ಮಾಡಿರುವುದಾಗಿ ವರದಿ ಮಾಡಿರುತ್ತಾರೆ.

| ಕ್ರ.ಸಂ. | ಕಡತ ಸಂಖ್ಯೆ | ವಿಷಯ |
|---|---|---|
| 1. | ಇಡಿ 517 ಡಿಪಿಐ 2004 | ಶ್ರೀ ಯಶವಂತ ಸೂರ್ಯವಂಶಿ, ಮರಾಠಿ ಉಪನ್ಯಾಸಕರ ಖಾಯಂಪೂರ್ವ ಸೇವಾ ಅವಧಿ ಬಗ್ಗೆ. |
| 2. | ಇಡಿ 20 ಡಿಎಆರ್ 2004 | ಶ್ರೀ ಆರ್.ವೈ. ಹೊಸಪೇಟೆ, ಉಪ ನಿರ್ದೇಶಕರ ಸೇವಾ ವಿಷಯ. |
| 3. | ಇಡಿ 819 ಡಿಪಿಐ 2002 | 1999ನೇ ಸಾಲಿನ ಮುಖ್ಯ ಶಿಕ್ಷಕರುಗಳ ಖಾ.ಪೂ.ಸೇ. ಬಗ್ಗೆ. |
| 4. | ಇಡಿ 237 ಡಿಪಿಐ 2004 | ಉಪನ್ಯಾಸಕರ ಅಂತಿಮ ಜೇಷ್ಠತಾ ಪಟ್ಟಿಯಲ್ಲಿ ನ್ಯೂನ್ಯತೆ ಬಗ್ಗೆ. |
| 5. | ಇಡಿ 107 ಡಿಜಿಎಂ 2004 | ಶ್ರೀ ಎಸ್.ಡಿ. ಹೊನ್ನಕೇರಿ, ಸಪಪೂಕಾ ಬರಡೋಲ ಇವರ ವರ್ಗಾವಣೆ ಬಗ್ಗೆ. |
| 6. | ಇಡಿ 109 ಡಿಜಿಎಂ 2004 | ಶ್ರೀಮತಿ ಲವೀನಾ ರೇಖಾ ಫರ್ನಾಂಡಿಸ್, ಮುಖ್ಯ ಶಿಕ್ಷಕಿ, ಸಪ್ರೌಶಾ ಇವರ ವಿಳಾಸ ಬದಲಾವಣೆ ಬಗ್ಗೆ. |
| 7. | ಇಡಿ 486 ಡಿಪಿಐ 2004 | ಶ್ರೀ ಸಿದ್ದರಾಜು ಡಿ. ಮತ್ತು ಶ್ರೀ ಕೆ. ದೊರೈರಾಜು ಇವರ ವರ್ಗಾವಣೆ ಬಗ್ಗೆ. |

ಈ ಬಗ್ಗೆ ಸದರಿಯವರ ವಿರುದ್ಧ ಕೆ.ಸಿ.ಎಸ್. (ಸಿಸಿಎ) ನಿಯಮಾವಳಿಯ ನಿಯಮ 12ರಡಿ ಶಿಸ್ತು ಕ್ರಮ ಜರುಗಿಸುವಂತೆ ಶಿಕ್ಷಣ ಇಲಾಖೆ ಪ್ರಸ್ತಾಪಿಸಿರುತ್ತದೆ. ಅದರಂತೆ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ರೀತಿ ವಿಳಂಬ ಮಾಡಿದ ದುರ್ನಡತೆಯ ಆರೋಪಕ್ಕಾಗಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 12ರನ್ವಯ ಮೇಲೆ (1)ರಲ್ಲಿ ಓದಲಾದ ದಿನಾಂಕ:06.06.2006ರ ನೋಟೀಸ್ ಜಾರಿ ಮಾಡಿ ವಿವರಣೆ ಕೇಳಲಾಯಿತು.

ಈ ಬಗ್ಗೆ ಮೇಲೆ (2)ರಲ್ಲಿ ಓದಲಾದ ದಿನಾಂಕ:28.06.2006ರ ತಮ್ಮ ಲಿಖಿತ ಉತ್ತರವನ್ನು ನೀಡಿದ ಆರೋಪಿತ ಅಧಿಕಾರಿ ಶ್ರೀ ಎಫ್.ಆರ್. ಸಂಬರಗಿ ರವರು ತಾವು ಅಧೀನ ಕಾರ್ಯದರ್ಶಿಯಾಗಿ ಶಿಕ್ಷಣ ಇಲಾಖೆಯಲ್ಲಿ ಕಾರ್ಯಭಾರ ವಹಿಸಿಕೊಂಡ ಕೆಲವೇ ತಿಂಗಳ ನಂತರ ಪ್ರೌಢ ಶಾಖೆಯಲ್ಲಿ ನಿರ್ವಹಿಸುತ್ತಿದ್ದ ಈ ಕೆಳಕಂಡ ಹೆಚ್ಚುವರಿ ವಿಷಯಗಳನ್ನು ತಮಗೆ ವಹಿಸಲಾಯಿತೆಂದೂ, ಇದರಿಂದ ಕಾರ್ಯಭಾರ ಹೆಚ್ಚಾಯಿತೆಂದು ತಿಳಿಸಿದ್ದಾರೆ.

I. 1) DSERT ಗೆ ಸಂಬಂಧಿಸಿದ ಕಡತಗಳು.

2) ಮಕ್ಕಳಿಗೆ ಉಚಿತವಾಗಿ ನೀಡುವ ಪಠ್ಯಪುಸ್ತಕ ಮುದ್ರಣಕ್ಕೆ ಸಂಬಂಧಿಸಿದ ವಿಷಯಗಳು.

3) ಪ್ರಾಥಮಿಕ ಶಿಕ್ಷಣ ಶಾಖೆಯಿಂದ ವರ್ಗಾಯಿಸಲ್ಪಟ್ಟ ಮುದ್ರಣ ಲೇಖನ ಸಾಮಗ್ರಿ ಮತ್ತು ಪ್ರಕಟಣೆಯ ಇಲಾಖೆಯ ಗ್ರೂಪ್-ಸಿ ವೃಂದದ ಸಂಪೂರ್ಣ ವಿಷಯಗಳು.

II. ಉಚಿತ ಪಠ್ಯಪುಸ್ತಕ ವಿತರಣೆ-ಜಟಿಲ ಸಮಸ್ಯೆ ಬಗ್ಗೆ ದಿನಂಪ್ರತಿ ಪ್ರಧಾನ ಕಾರ್ಯದರ್ಶಿಗಳ ಕಛೇರಿಯಲ್ಲಿ ನಡೆಯುತ್ತಿದ್ದ ಸಭೆಗೆ ಹಾಜರಾಗುತ್ತಿದ್ದು.

III. ಕೆ.ಪಿ.ಎಸ್.ಸಿ.ಯಿಂದ ನೇಮಕಗೊಂಡ 500ಕ್ಕೂ ಹೆಚ್ಚು ಮುಖ್ಯೋಪಾಧ್ಯಾಯರುಗಳ ಎಲ್ಲಾ ದಾಖಲೆಗಳ ಪರಿಶೀಲನೆ ಕಾರ್ಯಗಳಿಂದಾಗಿ ಕಡತ ವಿಳಂಬವಾಗಿರುವುದನ್ನು ಒಪ್ಪಿಕೊಂಡು, ತಾವು ಪ್ರಾಮಾಣಿಕವಾಗಿ ಕಡತ ವಿಲೇವಾರಿಗೆ ಹೆಚ್ಚಿನ ಒತ್ತು ನೀಡಿ ಕಾರ್ಯನಿರ್ವಹಿಸಿರುವುದಾಗಿ ತಿಳಿಸಿ, ತಮ್ಮ ಮೇಲಿನ ಆರೋಪಗಳಿಂದ ಆರೋಪಮುಕ್ತರನ್ನಾಗಿಸುವಂತೆ ಕೋರಿರುತ್ತಾರೆ.

ಈ ಬಗ್ಗೆ ಆರೋಪಣಾ ಪಟ್ಟಿ ಹಾಗೂ ಆರೋಪಿತರ ವಿವರಣೆಯನ್ನು ಕೂಲಂಕುಷವಾಗಿ ಪರಿಶೀಲಿಸಿ, ಆರೋಪಿತರ ವಿವರಣೆ ಹಾಗೂ ವಿಳಂಬಕ್ಕೆ ಕಾರಣವಾದ ಪರಿಸ್ಥಿತಿಯನ್ನು ಮನಗಂಡು ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 145 ಎಸ್‌ಇಎನ್ 2004, ಬೆಂಗಳೂರು, ದಿನಾಂಕ:7ನೇ ಆಗಸ್ಟ, 2006**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ, ಸರ್ಕಾರವು ಶ್ರೀ ಎಫ್.ಆರ್. ಸಂಬರಗಿ, ಸರ್ಕಾರದ ಅಧೀನ ಕಾರ್ಯದರ್ಶಿರವರು ಇನ್ನು ಮುಂದೆ ಕಡತ ವಿಳಂಬದಂತಹ ಪರಿಸ್ಥಿತಿ ಪುನರಾವರ್ತನೆಯಾಗದಂತೆ ಕಡತ ವಿಲೆಯಲ್ಲಿ ವಿಳಂಬ ಮಾಡದಂತೆ ಎಚ್ಚರಿಕೆ ನೀಡುತ್ತದೆ.

ಶ್ರೀ ಎಫ್.ಆರ್. ಸಂಬರಗಿ, ಸರ್ಕಾರದ ಅಧೀನ ಕಾರ್ಯದರ್ಶಿರವರು ಈ ಇಲಾಖಾ ವಿಚಾರಣೆ ನಡೆಯದಿದ್ದರೆ ಯಾವ ಸೌಲಭ್ಯಗಳನ್ನು ಪಡೆಯಲು ಅರ್ಹರಿದ್ದರೋ ಆ ಎಲ್ಲಾ ಸೌಲಭ್ಯಗಳನ್ನು ಪಡೆಯಲು ಅರ್ಹರಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ರಘುರಾಮ್ ಭಂಡಾರಿ**

ಪಿ.ಆರ್. 1198

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ, (ಸೇವೆಗಳು-3).

## ವಸತಿ ಸಚಿವಾಲಯ

**ವಿಷಯ:** ಬಾಗಲಕೋಟೆ ಜಿಲ್ಲೆ ಬಾಗಲಕೋಟೆ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ.

**ಉಲ್ಲೇಖ:** ಸರ್ಕಾರದ ಆದೇಶ ಸಂಖ್ಯೆ: ಸಂ.ವಇ/ 42/ ಹೆಚ್‌ಎಎಂ/ 1998, ದಿನಾಂಕ:10.04.2000.

**ಪ್ರಸ್ತಾವನೆ:**

ಸರ್ಕಾರವು ನಗರ ಆಶ್ರಯ ಸಮಿತಿಗಳನ್ನು ಉಲ್ಲೇಖಿತ ಆದೇಶದನ್ವಯ ವಿಧಾನಸಭಾ ಕ್ಷೇತ್ರವಾರು ಪುನರ್ ರಚಿಸಲು ತೀರ್ಮಾನಿಸಿದ್ದು, ಬಾಗಲಕೋಟೆ ಜಿಲ್ಲೆ, ಬಾಗಲಕೋಟೆ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ ಪರಿಶೀಲಿಸಿ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ವಇ/ 58/ ಹೆಚ್‌ಎಎಸ್ 2006, ಬೆಂಗಳೂರು, ದಿನಾಂಕ:28ನೇ ಜುಲೈ, 2006**

ಮೇಲ್ಕಂಡ ಸಂದರ್ಭದಲ್ಲಿ ಬಾಗಲಕೋಟೆ ಜಿಲ್ಲೆ, ಬಾಗಲಕೋಟೆ ನಗರ ಆಶ್ರಯ ಸಮಿತಿಗೆ ಈ ಕೆಳಕಂಡವರನ್ನು ಅಧಿಕಾರೇತರ ಸದಸ್ಯರನ್ನಾಗಿ ನೇಮಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಆಶ್ರಯ ಸಮಿತಿಯನ್ನು ಪುನರ್‌ರಚಿಸಲಾಗಿದೆ.

1. ಶ್ರೀ ಗುರುನಾಥ ಲಮಾಣಿ (ಗುಳಬಾಳ ತಾಂಡಾ), ಬಾಗಲಕೋಟೆ ಜಿಲ್ಲೆ. ಸದಸ್ಯರು
2. ಶ್ರೀಮತಿ ಭಾಗ್ಯಶ್ರೀ ಎಂ. ಹಂಡಿ, ಬಾಗಲಕೋಟೆ ಜಿಲ್ಲೆ ಸದಸ್ಯರು
3. ಶ್ರೀ ಸುಭಾಷ ಪಿ. ಕೊಠಾರಿ, ಬಾಗಲಕೋಟೆ ಜಿಲ್ಲೆ. ಸದಸ್ಯರು
4. ಶ್ರೀ ಮಹಾಲಿಂಗಯ್ಯ ಹಿರೇಮಠ, ಬಾಗಲಕೋಟೆ ಜಿಲ್ಲೆ. ಸದಸ್ಯರು

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1200

**ಎಸ್. ಇಂದುಮತಿ**

ಪೀಠಾಧಿಕಾರಿ-2, ವಸತಿ ಇಲಾಖೆ.

**ವಿಷಯ:** ಕೊಡಗು ಜಿಲ್ಲೆ, ವಿರಾಜಪೇಟೆ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ.

**ಉಲ್ಲೇಖ:** ಸರ್ಕಾರದ ಆದೇಶ ಸಂಖ್ಯೆ: ಸಂ.ವಇ/ 42/ ಹೆಚ್‌ಎಎಂ/ 1998, ದಿನಾಂಕ:10.04.2000.

**ಪ್ರಸ್ತಾವನೆ:**

ಸರ್ಕಾರವು ನಗರ ಆಶ್ರಯ ಸಮಿತಿಗಳನ್ನು ಉಲ್ಲೇಖಿತ ಆದೇಶದನ್ವಯ ವಿಧಾನಸಭಾ ಕ್ಷೇತ್ರವಾರು ಪುನರ್ ರಚಿಸಲು ತೀರ್ಮಾನಿಸಿದ್ದು, ಕೊಡಗು ಜಿಲ್ಲೆ, ವಿರಾಜಪೇಟೆ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ ಪರಿಶೀಲಿಸಿ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ವಇ/ 95/ ಹೆಚ್‌ಎಎಸ್ 2006, ಬೆಂಗಳೂರು, ದಿನಾಂಕ:1ನೇ ಆಗಸ್ಟ್, 2006**

ಮೇಲ್ಕಂಡ ಸಂದರ್ಭದಲ್ಲಿ ಕೊಡಗು ಜಿಲ್ಲೆ, ವಿರಾಜಪೇಟೆ ನಗರ ಆಶ್ರಯ ಸಮಿತಿಗೆ ಈ ಕೆಳಕಂಡವರನ್ನು ಅಧಿಕಾರೇತರ ಸದಸ್ಯರನ್ನಾಗಿ ನೇಮಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಆಶ್ರಯ ಸಮಿತಿಯನ್ನು ಪುನರ್‌ರಚಿಸಲಾಗಿದೆ.

1. ಶ್ರೀ ಹೆಚ್.ಟಿ. ಶಿವಕುಮಾರ್, ಶಿವಕೇರಿ, ವಿರಾಜಪೇಟೆ, ಕೊಡಗು ಜಿಲ್ಲೆ. ಸದಸ್ಯರು
2. ಶ್ರೀ ಎಂ.ಬಿ. ಚಂದ್ರನ್, ಗಾಂಧಿನಗರ, ವಿರಾಜಪೇಟೆ, ಕೊಡಗು ಜಿಲ್ಲೆ. ಸದಸ್ಯರು
3. ಶ್ರೀ ದಸ್ತಗೀರ್ ಅಹಮ್ಮದ್, ನೆಹರುನಗರ, ವಿರಾಜಪೇಟೆ, ಕೊಡಗು ಜಿಲ್ಲೆ. ಸದಸ್ಯರು
4. ಶ್ರೀಮತಿ ರೀನಾ ಪ್ರಕಾಶ್, ಗಾಂಧಿನಗರ, ವಿರಾಜಪೇಟೆ, ಕೊಡಗು ಜಿಲ್ಲೆ. ಸದಸ್ಯರು

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1201

**ಎಸ್. ಇಂದುಮತಿ**

ಪೀಠಾಧಿಕಾರಿ-2, ವಸತಿ ಇಲಾಖೆ.

**ವಿಷಯ:** ಕೋಲಾರ ಜಿಲ್ಲೆ, ಮುಳಬಾಗಿಲು ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ.

**ಉಲ್ಲೇಖ:** ಸರ್ಕಾರದ ಆದೇಶ ಸಂಖ್ಯೆ: ಸಂ.ವಇ/ 42/ ಹೆಚ್‌ಎಎಂ/ 1998, ದಿನಾಂಕ:10.04.2000.

**ಪ್ರಸ್ತಾವನೆ:**

ಸರ್ಕಾರವು ನಗರ ಆಶ್ರಯ ಸಮಿತಿಗಳನ್ನು ಉಲ್ಲೇಖಿತ ಆದೇಶದನ್ವಯ ವಿಧಾನಸಭಾ ಕ್ಷೇತ್ರವಾರು ಪುನರ್ ರಚಿಸಲು ತೀರ್ಮಾನಿಸಿದ್ದು, ಕೋಲಾರ ಜಿಲ್ಲೆ, ಮುಳಬಾಗಿಲು ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ ಪರಿಶೀಲಿಸಿ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ವಇ/ 102/ ಹೆಚ್‌ಎಎಸ್, 2006, ಬೆಂಗಳೂರು, ದಿನಾಂಕ:1ನೇ ಆಗಸ್ಟ್, 2006**

ಮೇಲ್ಕಂಡ ಸಂದರ್ಭದಲ್ಲಿ ಕೋಲಾರ ಜಿಲ್ಲೆ, ಮುಳಬಾಗಿಲು ನಗರ ಆಶ್ರಯ ಸಮಿತಿಗೆ ಈ ಕೆಳಕಂಡವರನ್ನು ಅಧಿಕಾರೇತರ ಸದಸ್ಯರನ್ನಾಗಿ ನೇಮಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಆಶ್ರಯ ಸಮಿತಿಯನ್ನು ಪುನರ್‌ರಚಿಸಲಾಗಿದೆ.

1. ಶ್ರೀ ಎನ್.ವಿ. ಶ್ರೀಧರ್, ಬಿನ್ ಲೇ: ವೆಂಕಟರಾಮಯ್ಯ, ಹೊಸಪಾಳ್ಯ, ಮುಳಬಾಗಿಲು, ಕೋಲಾರ ಜಿಲ್ಲೆ. ಸದಸ್ಯರು
2. ಶ್ರೀ ವಾಜೀದ್ ಎಂ.ಪಿ. ಬಿನ್ ಲೇ: ಮಹಮದ್ ಪ್ಯಾರೇಜಾನ್, ಕುರುಬರ ಪೇಟೆ, ಮುಳಬಾಗಿಲು, ಕೋಲಾರ ಜಿಲ್ಲೆ. ಸದಸ್ಯರು
3. ಶ್ರೀ ವಿ. ನಾರಾಯಣ ಎನ್. ಮುನಿವೆಂಕಟಪ್ಪ, ನಂ.3707, ಮುತ್ಯಾಲಪೇಟೆ, ಮುಳಬಾಗಿಲು, ಕೋಲಾರ ಜಿಲ್ಲೆ. ಸದಸ್ಯರು
4. ಶ್ರೀಮತಿ ವಿಜಯಲಕ್ಷ್ಮಿ ಕೋಂ ಲೇ: ಎನ್. ನಾಗರಾಜ್, ಪಳ್ಳಿಗರಪಾಳ್ಯ, ಮುಳಬಾಗಿಲು, ಕೋಲಾರ ಜಿಲ್ಲೆ. ಸದಸ್ಯರು

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1202

**ಎಸ್. ಇಂದುಮತಿ**

ಪೀಠಾಧಿಕಾರಿ-2, ವಸತಿ ಇಲಾಖೆ.

**ವಿಷಯ:** ಬಳ್ಳಾರಿ ಜಿಲ್ಲೆ, ಬಳ್ಳಾರಿ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ.

**ಉಲ್ಲೇಖ:** ಸರ್ಕಾರದ ಆದೇಶ ಸಂಖ್ಯೆ: ಸಂ.ವಇ/ 42/ ಹೆಚ್‌ಎಎಂ/ 1998, ದಿನಾಂಕ:10.04.2000.

**ಪ್ರಸ್ತಾವನೆ:**

ಸರ್ಕಾರವು ನಗರ ಆಶ್ರಯ ಸಮಿತಿಗಳನ್ನು ಉಲ್ಲೇಖಿತ ಆದೇಶದನ್ವಯ ವಿಧಾನಸಭಾ ಕ್ಷೇತ್ರವಾರು ಪುನರ್ ರಚಿಸಲು ತೀರ್ಮಾನಿಸಿದ್ದು, ಬಳ್ಳಾರಿ ಜಿಲ್ಲೆ, ಬಳ್ಳಾರಿ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ ಪರಿಶೀಲಿಸಿ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ವಇ/ 113/ ಹೆಚ್‌ಎಎಸ್, 2006, ಬೆಂಗಳೂರು, ದಿನಾಂಕ:1ನೇ ಆಗಸ್ಟ್, 2006**

ಮೇಲ್ಕಂಡ ಸಂದರ್ಭದಲ್ಲಿ ಬಳ್ಳಾರಿ ಜಿಲ್ಲೆ, ಬಳ್ಳಾರಿ ನಗರ ಆಶ್ರಯ ಸಮಿತಿಗೆ ಈ ಕೆಳಕಂಡವರನ್ನು ಅಧಿಕಾರೇತರ ಸದಸ್ಯರನ್ನಾಗಿ ನೇಮಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಆಶ್ರಯ ಸಮಿತಿಯನ್ನು ಪುನರ್‌ರಚಿಸಲಾಗಿದೆ.

1. ಶ್ರೀ ಕೊಂಡಯ್ಯ, ಶ್ರೀರಾಂಪುರ ಕಾಲೋನಿ, ಬಳ್ಳಾರಿ. ಸದಸ್ಯರು
2. ಶ್ರೀ ರಾಜು, ಕೋಟೆ, ಬಳ್ಳಾರಿ. ಸದಸ್ಯರು
3. ಶ್ರೀ ಮುನ್ನಾ, ಕಾಲಬಜಾರ, ಬಳ್ಳಾರಿ. ಸದಸ್ಯರು
4. ಶ್ರೀಮತಿ ಜಯಶ್ರೀ ಕೋಂ ವಸಂತಕುಮಾರ, ಬಳ್ಳಾರಿ. ಸದಸ್ಯರು

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1203

**ಎಸ್. ಇಂದುಮತಿ**

ಪೀಠಾಧಿಕಾರಿ-2, ವಸತಿ ಇಲಾಖೆ.

## ಕಂದಾಯ ಸಚಿವಾಲಯ

**ವಿಷಯ:** ಶ್ರೀ ಶಿವಲಿಂಗೇಶ್ವರ ವಿದ್ಯಾವರ್ಧಕ ಶಿಕ್ಷಣ ಸಂಸ್ಥೆ, ತಡಕಲ್, ಆಳಂದ ತಾಲ್ಲೂಕು, ಗುಲ್ಬರ್ಗಾ ಜಿಲ್ಲೆ ಈ ಸಂಸ್ಥೆಗೆ ನೇಮಕ ಮಾಡಲಾಗಿದ್ದ ಆಡಳಿತಾಧಿಕಾರಿ ಅವಧಿ ವಿಸ್ತರಣೆ ಕುರಿತು.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ: ಕಂಇ 44 ಮುನೊಸೊ 2004, ದಿನಾಂಕ:27.04.2005.

2. ಆಡಳಿತಾಧಿಕಾರಿ, ಶ್ರೀ ಶಿವಲಿಂಗೇಶ್ವರ ವಿದ್ಯಾವರ್ಧಕ ಶಿಕ್ಷಣ ಸಂಸ್ಥೆ, ತಡಕಲ್, ಇವರ ಪತ್ರ ಸಂಖ್ಯೆ: ಸಂಕೀರ್ಣ/ 2005-06/359, ದಿನಾಂಕ:13.06.2006.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಸರ್ಕಾರಿ ಆದೇಶದಲ್ಲಿ ಶ್ರೀ ಶಿವಲಿಂಗೇಶ್ವರ ವಿದ್ಯಾವರ್ಧಕ ಶಿಕ್ಷಣ ಸಂಸ್ಥೆ, ತಡಕಲ್, ಈ ಸಂಸ್ಥೆಗೆ ತಹಶೀಲ್ದಾರ್, ಆಳಂದ ತಾಲ್ಲೂಕು ಇವರನ್ನು ಸಂಸ್ಥೆಯ ಹಿತದೃಷ್ಟಿಯಿಂದ ಹಾಗೂ ಸಂಸ್ಥೆಗೆ ಚುನಾವಣೆ ನಡೆಸಿ ಚುನಾಯಿತ ಆಡಳಿತ ಮಂಡಳಿಗೆ ಅಧಿಕಾರ ಹಸ್ತಾಂತರಿಸಲು ಆಡಳಿತಾಧಿಕಾರಿಯನ್ನಾಗಿ ನೇಮಕ ಮಾಡಲಾಗಿದ್ದು, ಸದರಿ ಆಡಳಿತಾಧಿಕಾರಿಯ ಅವಧಿಯನ್ನು ಕಾಲಕಾಲಕ್ಕೆ ವಿಸ್ತರಿಸಿಕೊಂಡು ಬರಲಾಗಿದೆ. ಓದಲಾದ (2) ರಲ್ಲಿ ಆಡಳಿತಾಧಿಕಾರಿಗಳು ಪ್ರಸ್ತಾವನೆ ಸಲ್ಲಿಸಿ ಕಾರ್ಯ ಒತ್ತಡದಿಂದ ಸಂಸ್ಥೆಗೆ ಚುನಾವಣೆ ನಡೆಸುವುದು ಸಾಧ್ಯವಾಗಿರುವುದಿಲ್ಲ. ಆದ್ದರಿಂದ ಅವಧಿಯನ್ನು ವಿಸ್ತರಿಸಲು ಕೋರಿದ್ದಾರೆ. ಆಡಳಿತಾಧಿಕಾರಿಯ ಅವಧಿಯು ದಿನಾಂಕ:26.04.2006ಕ್ಕೆ ಮುಕ್ತಾಯಗೊಂಡಿದ್ದು, ಆಡಳಿತಾಧಿಕಾರಿಯ ಪ್ರಸ್ತಾವನೆಯನ್ನು ಪರಿಶೀಲಿಸಿ ಅವಧಿಯನ್ನು ವಿಸ್ತರಿಸಲು ಸರ್ಕಾರವು ತೀರ್ಮಾನಿಸಿದೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಕಂಇ:52:ಮುನೊಸೊ: 2006, ಬೆಂಗಳೂರು, ದಿನಾಂಕ:1ನೇ ಆಗಸ್ಟ್, 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರ ಕಲಂ-27ಎ ಪ್ರಕಾರ ಶ್ರೀ ಶಿವಲಿಂಗೇಶ್ವರ ವಿದ್ಯಾವರ್ಧಕ ಶಿಕ್ಷಣ ಸಂಸ್ಥೆ, ತಡಕಲ್, ಈ ಸಂಸ್ಥೆಗೆ ನೇಮಕ ಮಾಡಲಾಗಿದ್ದ ಆಡಳಿತಾಧಿಕಾರಿ ಅವಧಿಯನ್ನು ಸಂಸ್ಥೆಯ ಹಾಗೂ ಸಾರ್ವಜನಿಕ ಹಿತದೃಷ್ಟಿಯಿಂದ ದಿನಾಂಕ:27.04.2006 ರಿಂದ ಮುಂದಿನ 6 ತಿಂಗಳ ಅವಧಿಗೆ ಅಥವಾ ಸಂಸ್ಥೆಗೆ ಚುನಾವಣೆ ನಡೆಸಿ, ಚುನಾಯಿತ ನೂತನ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸುವವರೆಗೆ ಅಥವಾ ಇವೆರಡರಲ್ಲಿ ಯಾವುದು ಮೊದಲೋ, ಅಲ್ಲಿಯವರೆಗೆ ವಿಸ್ತರಿಸಿ ಆದೇಶಿಸಿದೆ.

ಆಡಳಿತಾಧಿಕಾರಿಯವರು ಈ ಅವಧಿಯೊಳಗೆ ಶ್ರೀ ಶಿವಲಿಂಗೇಶ್ವರ ವಿದ್ಯಾವರ್ಧಕ ಶಿಕ್ಷಣ ಸಂಸ್ಥೆ, ತಡಕಲ್, ಈ ಸಂಸ್ಥೆಗೆ ಚುನಾವಣೆ ನಡೆಸಿ ಚುನಾಯಿತ ನೂತನ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸುವಂತೆ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಶಿವಲಿಂಗ**

ಪಿ.ಆರ್. 1204

ಪೀಠಾಧಿಕಾರಿ,

ಕಂದಾಯ ಇಲಾಖೆ, (ನೋಂದಣಿ ಮತ್ತು ಮುದ್ರಾಂಕ).

## ಯೋಜನೆ ಹಾಗೂ ಸಾಂಖ್ಯಿಕ ಸಚಿವಾಲಯ

**ವಿಷಯ:** ಶ್ರೀ ಎಸ್. ರಾಜರಾವ್, ಉಪ ನಿರ್ದೇಶಕರು (ನಿವೃತ್ತ) ಹಾಗೂ ಶ್ರೀ ಹೆಚ್.ಬಿ. ನಾಗಬೋರಯ್ಯ, ಪ್ರಥಮ ದರ್ಜೆ ಸಹಾಯಕರು (ನಿವೃತ್ತ) ಇವರುಗಳ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದು ಪರಿಗಣಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ: ಐಎಫ್‌ಎಸ್ 61 ಡಿಎಸ್‌ಇ 93, ದಿನಾಂಕ:04.05.1993.

2. ಆಸಾಂನಿ ಕಛೇರಿ ಆದೇಶ ಸಂಖ್ಯೆ: ಎಡಿಎಂ 542/ 92-93 (ಸಂ.ಡಿಇಎಸ್. ಎಡಿಎಂ (III) 92-93:23861-66, ದಿನಾಂಕ:16.11.1992.
3. ಸರ್ಕಾರಿ ಆದೇಶ ಸಂಖ್ಯೆ: ಐಎಎಫ್‌ಎಸ್ 61 ಡಿಎಸ್‌ಇ 93, ದಿನಾಂಕ:13.12.1993.
4. ಸರ್ಕಾರಿ ಆದೇಶ ಸಂಖ್ಯೆ: ಐಎಫ್‌ಎಸ್ 61 ಡಿಎಸ್‌ಇ 93, ದಿನಾಂಕ:20.09.1994.
5. ಲೋಕಾಯುಕ್ತರಿಂದ ಬಂದಿರುವ ಇಲಾಖಾ ವಿಚಾರಣಾ ವರದಿ ದಿನಾಂಕ:05.03.2001.

6. ಸರ್ಕಾರದ ಆದೇಶ ಸಂಖ್ಯೆ: ಐಎಫ್ಎಸ್ 61 ಡಿಎಸ್ಇ 93, ದಿನಾಂಕ:03.06.2005 ಹಾಗೂ ದಿನಾಂಕ:23.07.2005ರ ತಿದ್ದುಪಡಿ.

7. ಆಸಾಂನಿ ಪತ್ರ ಸಂಖ್ಯೆ: 51 ಆಡಳಿತ 2/ 28890-92/01, ದಿನಾಂಕ:08.03.2006.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ದಿನಾಂಕ:04.05.1993ರ ಸರ್ಕಾರಿ ಆದೇಶದಲ್ಲಿ ಶ್ರೀ ಎಸ್.ರಾಜರಾವ್, ಉಪ ನಿರ್ದೇಶಕರು (ನಿವೃತ್ತ) ಇವರನ್ನು ಹಾಗೂ ಓದಲಾದ (2)ರ ದಿನಾಂಕ:16.11.1992ರ ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ ರವರ ಕಛೇರಿ ಆದೇಶದಲ್ಲಿ ಶ್ರೀ ಹೆಚ್.ಬಿ. ನಾಗಬೋರಯ್ಯ, ಪ್ರಥಮ ದರ್ಜೆ ಸಹಾಯಕರು (ನಿವೃತ್ತ) ಇವರುಗಳನ್ನು ಸರ್ಕಾರದ ಹಣವನ್ನು ದುರುಪಯೋಗಪಡಿಸಿಕೊಂಡಿರುವುದರ ಕುರಿತು ಅಮಾನತ್ತಿನಲ್ಲಿಡಲಾಗಿತ್ತು.

ಮೇಲೆ ಓದಲಾದ (3)ರ ದಿನಾಂಕ:13.12.1993ರ ಆದೇಶದಲ್ಲಿ ಸದರಿ ಅಧಿಕಾರಿಗಳ ವಿರುದ್ಧ ಜಂಟಿ ಇಲಾಖಾ ವಿಚಾರಣೆ ನಡೆಸಲು ತೀರ್ಮಾನಿಸಲಾಗಿರುತ್ತದೆ.

ಮೇಲೆ ಓದಲಾದ (4)ರ ದಿನಾಂಕ:20.09.1994ರ ಆದೇಶದಲ್ಲಿ ಸದರಿ ಅಧಿಕಾರಿಗಳನ್ನು ಅಮಾನತ್ತಿನಲ್ಲಿ ಇಟ್ಟಿದ್ದ ಆದೇಶ ರದ್ದುಪಡಿಸಲಾಗಿರುತ್ತದೆ.

ಮೇಲೆ ಓದಲಾದ (5)ರ ದಿನಾಂಕ:05.03.2001ರಂದು ಲೋಕಾಯುಕ್ತರಿಂದ ಇಲಾಖಾ ವಿಚಾರಣೆ ವರದಿ ಸ್ವೀಕೃತವಾಗಿದ್ದು ಆರೋಪಿತ ಅಧಿಕಾರಿಗಳು ಸರ್ಕಾರದ ಹಣ ದುರುಪಯೋಗಪಡಿಸಿಕೊಂಡಿರುವುದು ಸಾಬೀತಾಗಿರುವುದರಿಂದ ಮೇಲೆ ಓದಲಾದ (6)ರ ದಿನಾಂಕ:03.06.2005ರ ಸರ್ಕಾರದ ಆದೇಶದಲ್ಲಿ ದಂಡನೆ ವಿಧಿಸಿ ಆದೇಶ ಹೊರಡಿಸಲಾಗಿರುತ್ತದೆ ಮತ್ತು ದಿನಾಂಕ:23.07.2005ರಂದು ತಿದ್ದುಪಡಿ ಆದೇಶವನ್ನು ಹೊರಡಿಸಲಾಗಿರುತ್ತದೆ.

ಮೇಲೆ ಓದಲಾದ (7)ರ ನಿರ್ದೇಶಕರು, ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ ರವರ ದಿನಾಂಕ:08.03.2006ರ ಪತ್ರದಲ್ಲಿ ಸದರಿ ಅಧಿಕಾರಿಗಳು ಹಣ ದುರುಪಯೋಗಪಡಿಸಿಕೊಂಡಿರುವ ಬಗ್ಗೆ ಅವರ ನಿವೃತ್ತಿ ಉಪದಾನಗಳಿಂದ ಕಡಿತಗೊಳಿಸಿ ಉಳಿದ ನಿವೃತ್ತಿ ಉಪದಾನಗಳನ್ನು ಮಂಜೂರು ಮಾಡಲು ದಿನಾಂಕ:03.06.2005ರ ಸರ್ಕಾರದ ಆದೇಶದಲ್ಲಿ ಆದೇಶಿಸಿದ್ದು, ಆದರೆ ಅವರ ಅಮಾನತ್ತಿನ ಅವಧಿಯನ್ನು ಯಾವ ರೀತಿ ಪರಿಗಣಿಸಬೇಕೆಂಬ ಬಗ್ಗೆ ಆದೇಶ ನೀಡಿರುವುದಿಲ್ಲವಾದುದರಿಂದ ಸದರಿಯವರಿಗೆ ಅಮಾನತ್ತಿನ ಅವಧಿಯು ಇತ್ಯರ್ಥವಾಗುವವರೆಗೆ ಅರ್ಹತಾದಾಯಕ ಸೇವೆಯನ್ನು ಲೆಕ್ಕಾಚಾರ ಮಾಡಲು ಸಾಧ್ಯವಾಗುವುದಿಲ್ಲವೆಂದು ತಿಳಿಸಿರುತ್ತಾರೆ.

ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಐಎಫ್ಎಸ್ 61 ಡಿಎಸ್ಇ 1993, ಬೆಂಗಳೂರು, ದಿನಾಂಕ:27ನೇ ಜುಲೈ, 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯದ ಸೇವೆಗೆ ಸೇರಿದ ಶ್ರೀ ಎಸ್.ರಾಜರಾವ್, ಉಪ ನಿರ್ದೇಶಕರು (ನಿವೃತ್ತ) ಹಾಗೂ ಶ್ರೀ ಹೆಚ್.ಬಿ. ನಾಗಬೋರಯ್ಯ, ಪ್ರಥಮ ದರ್ಜೆ ಸಹಾಯಕರು (ನಿವೃತ್ತ) ಇವರುಗಳು ಹಣ ದುರುಪಯೋಗಪಡಿಸಿಕೊಂಡಿದ್ದರೆನ್ನಲಾದ ಆಪಾದನೆ ಕುರಿತಂತೆ ಸರ್ಕಾರದ ಆದೇಶ ಸಂಖ್ಯೆ: ಐಎಫ್ಎಸ್ 61 ಡಿಎಸ್ಇ 93, ದಿನಾಂಕ:13.12.1993ರಲ್ಲಿ ಜಂಟಿಯಾಗಿ ಇಲಾಖಾ ವಿಚಾರಣೆ ನಡೆಸಿ ದಂಡನೆ ವಿಧಿಸಿರುವುದರಿಂದ ಈ ಕೆಳಕಂಡ ದಿನಾಂಕಗಳಿಗೆ ಸಂಬಂಧಿಸಿದಂತೆ ಅಮಾನತ್ತಿನ ಅವಧಿಯನ್ನು "ಅಮಾನತ್ತಿನ ಅವಧಿ" ಎಂದು ಪರಿಗಣಿಸಿ ಸರ್ಕಾರವು ಆದೇಶಿಸಿದೆ.

1. ಶ್ರೀ ಎಸ್. ರಾಜರಾವ್, ಉಪ ನಿರ್ದೇಶಕರು (ನಿವೃತ್ತ) - ದಿನಾಂಕ:04.05.1993 ರಿಂದ 19.09.1994ರ ವರೆಗೆ.
2. ಶ್ರೀ ಹೆಚ್.ಬಿ. ನಾಗಬೋರಯ್ಯ, ಪ್ರಥಮ ದರ್ಜೆ ಸಹಾಯಕರು (ನಿವೃತ್ತ) - ದಿನಾಂಕ:16.11.1992 ರಿಂದ 19.09.1994ರ ವರೆಗೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ವಿಶಾಲಾಕ್ಷಮ್ಮ**

ಪಿ.ಆರ್. 1205

ಸರ್ಕಾರದ ಅಧೀನ ಕಾರ್ಯದರ್ಶಿ,

ಯೋಜನೆ ಹಾಗೂ ಸಾಂಖ್ಯಿಕ ಇಲಾಖೆ.

## ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ

**ವಿಷಯ:** 2006-07ನೇ ಸಾಲಿನ ಕಾರ್ಯಚಟುವಟಿಕೆಗಳಿಗಾಗಿ ರಾಜ್ಯ ಅಕಾಡೆಮಿಗಳಿಗೆ ಅನುದಾನ ಬಿಡುಗಡೆ ಬಗ್ಗೆ.

**ಓದಲಾಗಿದೆ:** ಆಯುಕ್ತರು, ಸುವರ್ಣ ಕರ್ನಾಟಕ ಹಾಗೂ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಇವರ ಪತ್ರ ಸಂಖ್ಯೆ: ಕಸನಿ:12:ಅಕಾಡೆಮಿ:2006-07, ದಿನಾಂಕ:10.05.2006.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ ಆಯುಕ್ತರು, ಸುವರ್ಣ ಕರ್ನಾಟಕ, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ಇವರು 2006-07ನೇ ಸಾಲಿನಲ್ಲಿ ಕ್ರಿಯಾ ಯೋಜನೆ ಪ್ರಕಾರ ರಾಜ್ಯ ಅಕಾಡೆಮಿಗಳ ಪ್ರಸಕ್ತ ಸಾಲಿನ ಕಾರ್ಯಚಟುವಟಿಕೆಗಳಿಗಾಗಿ ಅನುದಾನದ 1/3ನೇ ಭಾಗವಾಗಿ ಯೋಜನೆಯಡಿಯಲ್ಲಿ ರೂ.55.00 ಲಕ್ಷ ಬಿಡುಗಡೆ ಮಾಡಲು ಕೋರಿ ಪ್ರಸ್ತಾವನೆ ಸಲ್ಲಿಸಿರುವರು. ಪ್ರಸ್ತಾವನೆಯನ್ನು ಸರ್ಕಾರ ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶ ನೀಡಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಂಕಇ 108 ಕರಅ 2006, ಬೆಂಗಳೂರು, ದಿನಾಂಕ:21ನೇ ಜುಲೈ, 2006**

ಪ್ರಸಕ್ತ ಸಾಲಿನಲ್ಲಿ ಈ ಕೆಳಕಂಡ 11 ಅಕಾಡೆಮಿಗಳಿಗೆ ಅವುಗಳ ಮುಂದೆ ನಮೂದಿಸಿರುವಂತೆ ಒಟ್ಟು ರೂ.55.00 ಲಕ್ಷಗಳ (ರೂಪಾಯಿ ಐವತ್ತೈದು ಲಕ್ಷಗಳು ಮಾತ್ರ) ಅನುದಾನವನ್ನು ಅಕಾಡೆಮಿಗಳಿಗೆ ಬಿಡುಗಡೆ ಮಾಡುವ ಸಲುವಾಗಿ ಆಯುಕ್ತರು, ಸುವರ್ಣ ಕರ್ನಾಟಕ ಹಾಗೂ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು ಇವರಿಗೆ ಬಿಡುಗಡೆ ಮಾಡಲಾಗಿದೆ.

(ರೂ.ಲಕ್ಷಗಳಲ್ಲಿ)

| | | |
|---|---|---|
| 1. | ಕರ್ನಾಟಕ ಅನುವಾದ ಸಾಹಿತ್ಯ ಅಕಾಡೆಮಿ | ರೂ.5.00 |
| 2. | ಕರ್ನಾಟಕ ಕೊಡವ ಸಾಹಿತ್ಯ ಅಕಾಡೆಮಿ | ರೂ.5.00 |
| 3. | ಕರ್ನಾಟಕ ಕೊಂಕಣಿ ಸಾಹಿತ್ಯ ಅಕಾಡೆಮಿ | ರೂ.5.00 |
| 4. | ಕರ್ನಾಟಕ ತುಳು ಸಾಹಿತ್ಯ ಅಕಾಡೆಮಿ | ರೂ.5.00 |
| 5. | ಕರ್ನಾಟಕ ನಾಟಕ ಅಕಾಡೆಮಿ | ರೂ.5.00 |
| 6. | ಕರ್ನಾಟಕ ಸಾಹಿತ್ಯ ಅಕಾಡೆಮಿ | ರೂ.5.00 |
| 7. | ಕರ್ನಾಟಕ ಶಿಲ್ಪಕಲಾ ಅಕಾಡೆಮಿ | ರೂ.5.00 |
| 8. | ಕರ್ನಾಟಕ ಲಲಿತಕಲಾ ಅಕಾಡೆಮಿ | ರೂ.5.00 |
| 9. | ಕರ್ನಾಟಕ ಸಂಗೀತ ನೃತ್ಯ ಅಕಾಡೆಮಿ | ರೂ.5.00 |
| 10. | ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ | ರೂ.5.00 |
| 11. | ಕರ್ನಾಟಕ ಉರ್ದು ಅಕಾಡೆಮಿ | ರೂ.5.00 |
| | **ಒಟ್ಟು** | **ರೂ.55.00.** |

ಈ ವೆಚ್ಚವನ್ನು 2006-07ನೇ ಸಾಲಿನ ಆಯವ್ಯಯ ಲೆಕ್ಕಶೀರ್ಷಿಕೆ 2205-00-102-4-13-101 (ಯೋಜನೆ) ಅಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ: ಇಡಿ 512 ಟಿಎಫ್(ಬಿ.ಎ.) ದಿನಾಂಕ:18.07.2006ರ ಸಹಮತಿಯಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಕೆ. ರಾಮಚಂದ್ರ**

ಸರ್ಕಾರದ ಅಧೀನ ಕಾರ್ಯದರ್ಶಿ(ಪ್ರ),

ಕನ್ನಡ ಮತ್ತು ಸಂಸ್ಕೃತಿ, ವಾರ್ತಾ

ಮತ್ತು ಪ್ರವಾಸೋದ್ಯಮ ಇಲಾಖೆ.

ಪಿ.ಆರ್. 1206

**ವಿಷಯ:** 2006-07ನೇ ಸಾಲಿನ ಕಾರ್ಯಚಟುವಟಿಕೆಗಳಿಗಾಗಿ ರಾಜ್ಯ ಅಕಾಡೆಮಿಗಳಿಗೆ ಅನುದಾನ ಬಿಡುಗಡೆ ಬಗ್ಗೆ.

**ಓದಲಾಗಿದೆ:** ಆಯುಕ್ತರು, ಸುವರ್ಣ ಕರ್ನಾಟಕ ಹಾಗೂ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಇವರ ಪತ್ರ ಸಂಖ್ಯೆ: ಕಸನಿ:12:ಅಕಾಡೆಮಿ:2006-07, ದಿನಾಂಕ:10.05.2006.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ ಆಯುಕ್ತರು, ಸುವರ್ಣ ಕರ್ನಾಟಕ, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ಇವರು 2006-07ನೇ ಸಾಲಿನಲ್ಲಿ ಕ್ರಿಯಾ ಯೋಜನೆ ಪ್ರಕಾರ ರಾಜ್ಯ ಅಕಾಡೆಮಿಗಳ ಪ್ರಸಕ್ತ ಸಾಲಿನ ಕಾರ್ಯಚಟುವಟಿಕೆಗಳಿಗಾಗಿ ಅನುದಾನದ 1/3ನೇ ಭಾಗವಾಗಿ ಯೋಜನೇತರ ಅಡಿಯಲ್ಲಿ ರೂ.20.00 ಲಕ್ಷ ಬಿಡುಗಡೆ ಮಾಡಲು ಕೋರಿ ಪ್ರಸ್ತಾವನೆ ಸಲ್ಲಿಸಿರುವರು. ಪ್ರಸ್ತಾವನೆಯನ್ನು ಸರ್ಕಾರ ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶ ನೀಡಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಂಕಇ 108 ಕರಅ 2006(1), ಬೆಂಗಳೂರು, ದಿನಾಂಕ:21ನೇ ಜುಲೈ, 2006**

ಪ್ರಸಕ್ತ ಸಾಲಿನಲ್ಲಿ ಈ ಕೆಳಕಂಡ ಅಕಾಡೆಮಿಗಳಿಗೆ ಅವುಗಳ ಮುಂದೆ ನಮೂದಿಸಿರುವಂತೆ ಒಟ್ಟು ರೂ.20.00 ಲಕ್ಷಗಳ (ರೂಪಾಯಿ ಇಪ್ಪತ್ತು ಲಕ್ಷಗಳು ಮಾತ್ರ) ಅನುದಾನವನ್ನು ಅಕಾಡೆಮಿಗಳಿಗೆ ಬಿಡುಗಡೆ ಮಾಡುವ ಸಲುವಾಗಿ ಆಯುಕ್ತರು, ಸುವರ್ಣ ಕರ್ನಾಟಕ ಹಾಗೂ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು ಇವರಿಗೆ ಬಿಡುಗಡೆ ಮಾಡಲಾಗಿದೆ.

(ರೂ.ಲಕ್ಷಗಳಲ್ಲಿ)

| | | |
|---|---|---|
| 1. | ಕರ್ನಾಟಕ ಅನುವಾದ ಸಾಹಿತ್ಯ ಅಕಾಡೆಮಿ | - |
| 2. | ಕರ್ನಾಟಕ ಕೊಡವ ಸಾಹಿತ್ಯ ಅಕಾಡೆಮಿ | ರೂ.2.00 |
| 3. | ಕರ್ನಾಟಕ ಕೊಂಕಣಿ ಸಾಹಿತ್ಯ ಅಕಾಡೆಮಿ | ರೂ.2.00 |
| 4. | ಕರ್ನಾಟಕ ತುಳು ಸಾಹಿತ್ಯ ಅಕಾಡೆಮಿ | ರೂ.2.00 |
| 5. | ಕರ್ನಾಟಕ ನಾಟಕ ಅಕಾಡೆಮಿ | ರೂ.2.00 |
| 6. | ಕರ್ನಾಟಕ ಸಾಹಿತ್ಯ ಅಕಾಡೆಮಿ | ರೂ.2.00 |
| 7. | ಕರ್ನಾಟಕ ಶಿಲ್ಪಕಲಾ ಅಕಾಡೆಮಿ | ರೂ.2.00 |
| 8. | ಕರ್ನಾಟಕ ಲಲಿತಕಲಾ ಅಕಾಡೆಮಿ | ರೂ.2.00 |
| 9. | ಕರ್ನಾಟಕ ಸಂಗೀತ ನೃತ್ಯ ಅಕಾಡೆಮಿ | ರೂ.2.00 |
| 10. | ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ | ರೂ.2.00 |
| 11. | ಕರ್ನಾಟಕ ಉರ್ದು ಅಕಾಡೆಮಿ | ರೂ.2.00 |
| | **ಒಟ್ಟು** | **ರೂ.20.00.** |

ಈ ವೆಚ್ಚವನ್ನು 2006-07ನೇ ಸಾಲಿನ ಆಯವ್ಯಯ ಲೆಕ್ಕಶೀರ್ಷಿಕೆ 2205-00-102-4-13-101 (ಯೋಜನೇತರ) ಅಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ: ಇಡಿ 512 ಟಿಎಫ್(ಬಿ.ಎ.) ದಿನಾಂಕ:18.07.2006ರ ಸಹಮತಿಯಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಕೆ. ರಾಮಚಂದ್ರ**

ಸರ್ಕಾರದ ಅಧೀನ ಕಾರ್ಯದರ್ಶಿ(ಪ್ರ),

ಕನ್ನಡ ಮತ್ತು ಸಂಸ್ಕೃತಿ, ವಾರ್ತಾ

ಮತ್ತು ಪ್ರವಾಸೋದ್ಯಮ ಇಲಾಖೆ.

ಪಿ.ಆರ್. 1207

**ವಿಷಯ:** ಭಾರತೀಯ ಭಾಷೆಗಳ ಕೇಂದ್ರ ಸಂಸ್ಥೆಯ ಅಂಚೆ ಮೂಲಕ ಕನ್ನಡ ಶಿಕ್ಷಣ ಯೋಜನೆಗೆ ಮೊದಲ ಕಂತಿನ ಹಣ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** ಆಯುಕ್ತರು, ಸುವರ್ಣ ಕರ್ನಾಟಕ ಹಾಗೂ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಇವರ ಪತ್ರ ಸಂಖ್ಯೆ: ಕಸನಿ:7:ಕ.ಅ.:2006-07, ದಿನಾಂಕ:01.06.2006.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ ಆಯುಕ್ತರು, ಸುವರ್ಣ ಕರ್ನಾಟಕ ಹಾಗೂ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು ಇವರು ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಹಾಗೂ ಮೈಸೂರಿನ ಭಾರತೀಯ ಭಾಷೆಗಳ ಕೇಂದ್ರ ಸಂಸ್ಥೆಯ ಸಹಕಾರದೊಂದಿಗೆ ಕನ್ನಡ ಬಾರದವರಿಗೆ ಒಂದು ವರ್ಷದ ಅವಧಿಯಲ್ಲಿ ಅಂಚೆ ಮೂಲಕ ಕನ್ನಡ ಶಿಕ್ಷಣವನ್ನು ನೀಡಲಾಗುತ್ತಿದ್ದು, ಪ್ರಸಕ್ತ ಸಾಲಿನ ಕ್ರೀಯಾ ಯೋಜನೆಯಲ್ಲಿ ರೂ.3.00 ಲಕ್ಷಗಳ ಆಯವ್ಯಯ ಅವಕಾಶ ಮಾಡಿಕೊಂಡಿದೆ, ಅಂಚೆ ಮೂಲಕ ಕನ್ನಡ ಶಿಕ್ಷಣ ಯೋಜನೆ ಅಡಿ ಕೆಲಸ ಮಾಡುವ ಕಾರ್ಯಕರ್ತರಿಗೆ ಸಿಬ್ಬಂದಿ ವೇತನ ಪಾಠವಳಿಗಳನ್ನು ಮುದ್ರಿಸಲು ಲೇಖನ ಸಾಮಗ್ರಿ ಖರೀದಿಸಲು ರಾಜ್ಯಾದ್ಯಂತ ಸಂಪರ್ಕ ಶಿಬಿರ ಏರ್ಪಡಿಸುವ ಮತ್ತಿತರೆ ವೆಚ್ಚಗಳಿಗಾಗಿ ಮೊದಲ ಕಂತು ರೂ.1.00 ಲಕ್ಷಗಳ ಅನುದಾನವನ್ನು ಬಿಡುಗಡೆ ಮಾಡಲು ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಪ್ರಸ್ತಾವನೆಯನ್ನು ಸರ್ಕಾರ ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶ ನೀಡಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಂಕಇ 117 ಕರಅ 2006, ಬೆಂಗಳೂರು, ದಿನಾಂಕ:25ನೇ ಜುಲೈ, 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಕೇಂದ್ರ ಸಂಸ್ಥೆ, ಯೋಜನೆಗೆ ಮೊದಲ ಕಂತಿನ ಹಣ ರೂ.1.00 ಲಕ್ಷ (ರೂಪಾಯಿ ಒಂದು ಲಕ್ಷಗಳು ಮಾತ್ರ) ಗಳನ್ನು ಶೈಕ್ಷಣಿಕ ಕಾರ್ಯದರ್ಶಿ ಹಾಗೂ ಪ್ರಭಾರಿ ಅಧಿಕಾರಿ, ಭಾರತೀಯ ಭಾಷೆಗಳ ಕೇಂದ್ರ ಸಂಸ್ಥೆಯ ಅಂಚೆ ಮೂಲಕ ಕನ್ನಡ ಶಿಕ್ಷಣ ಮೈಸೂರು ಇವರಿಗೆ ಬಿಡುಗಡೆ ಮಾಡಲು ಆಯುಕ್ತರು ಸುವರ್ಣ ಕರ್ನಾಟಕ, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು ಇವರಿಗೆ ಅನುದಾನವನ್ನು ಮಂಜೂರು ಮಾಡಿದೆ.

ಈ ವೆಚ್ಚವನ್ನು 2006-07ನೇ ಸಾಲಿನ ಆಯವ್ಯಯ ಲೆಕ್ಕಶೀರ್ಷಿಕೆ 2205-00-001-0-01-059 (ಯೋಜನೆ) ಅಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ: ಇಡಿ 511 ಐಎಎಫ್(ಬಿ)2006, ದಿನಾಂಕ:24.07.2006ರ ಸಹಮತಿಯಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಟಿ.ಕೆ. ರಾಮಚಂದ್ರ**
ಸರ್ಕಾರದ ಅಧೀನ ಕಾರ್ಯದರ್ಶಿ(ಪ್ರ),
ಕನ್ನಡ ಮತ್ತು ಸಂಸ್ಕೃತಿ, ವಾರ್ತಾ
ಮತ್ತು ಪ್ರವಾಸೋದ್ಯಮ ಇಲಾಖೆ.

ಪಿ.ಆರ್. 1208

**ವಿಷಯ:** ಸುವರ್ಣ ಕರ್ನಾಟಕ ಸಾಂಸ್ಕೃತಿಕ ದಿಬ್ಬಣ ಏರ್ಪಡಿಸಲು ಅನುದಾನ ಮಂಜೂರಾತಿ ಕುರಿತು.

**ಓದಲಾಗಿದೆ:** ಆಯುಕ್ತರು, ಸುವರ್ಣ ಕರ್ನಾಟಕ ಹಾಗೂ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಇವರ ಪತ್ರ ಸಂಖ್ಯೆ: ಕಸನಿ:ಸುಕ:2005-06, ದಿನಾಂಕ:10.07.2006.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ ಆಯುಕ್ತರು, ಸುವರ್ಣ ಕರ್ನಾಟಕ ಹಾಗೂ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು ಇವರು ಸುವರ್ಣ ಕರ್ನಾಟಕದ ಪ್ರಾರಂಭದ ಪೂರ್ವಭಾವಿ ಪ್ರದರ್ಶನವಾಗಿ ಸಾಂಸ್ಕೃತಿಕ ದಿಬ್ಬಣವನ್ನು ಅತ್ಯಂತ ಯಶಸ್ವಿಯಾಗಿ ಜನೋತ್ಸವವಾಗಿ ಏರ್ಪಡಿಸಲು ಸರ್ಕಾರ ತೀರ್ಮಾನಿಸಿದೆ. ಈ ಸಂಸ್ಕೃತಿ ದಿಬ್ಬಣವು ಅಕ್ಟೋಬರ್ 4 ರಿಂದ 8 ತಂಡಗಳಲ್ಲಿ ಏಕ ಕಾಲದಲ್ಲಿ ಹೊರಟು ಒಂದೊಂದು ತಂಡವು ಕನಿಷ್ಠ 3 ಜಿಲ್ಲೆಗಳಲ್ಲಿ ಸಂಚರಿಸಿ ನಂತರ ಅಕ್ಟೋಬರ್ 30ಕ್ಕೆ ಬೆಂಗಳೂರನ್ನು ತಲುಪುತ್ತದೆ. ಬೆಂಗಳೂರು ಗ್ರಾಮಾಂತರ ಮತ್ತು ನಗರ ಬಡಾವಣೆಗಳಲ್ಲಿ ಕಾರ್ಯಕ್ರಮಗಳನ್ನು ಏರ್ಪಡಿಸಿ ನವೆಂಬರ್ 1ರಂದು ನಗರದ ವಿವಿಧ ಕಡತಗಳಲ್ಲಿ ಹಾಯ್ದು ವಿಧಾನ ಸೌಧದ ಮೂಲಕ ಸುವರ್ಣ ಕರ್ನಾಟಕ ಪ್ರಾರಂಭೋತ್ಸವದ ಕೇಂದ್ರವನ್ನು ತಲುಪಲಿದೆ. ಈ ಪ್ರಾರಂಭೋತ್ಸವದ ಸ್ಥಳ ಕಂಠೀರವ ಕ್ರೀಡಾಂಗಣವಾಗಿರುತ್ತದೆ. ಈ ಕಾರ್ಯಕ್ರಮಕ್ಕಾಗಿ ಇಲಾಖೆಯ ಎಲ್ಲಾ ಅಕಾಡೆಮಿಗಳ ಸಹಯೋಗದೊಂದಿಗೆ ಏರ್ಪಡಿಸಲು ಕಾರ್ಯಕ್ರಮಗಳ ಕಲಾವಿದರ ಸಂಭಾವನೆ ದಿಬ್ಬಣಕ್ಕೆ ಅಗತ್ಯವಾದ 5 ವಾಹನಗಳಂತೆ 40 ವಾಹನಗಳಿಗೆ ಅಲಂಕಾರ ಇಂಧನ ಮತ್ತು ಇತರೆ ವೆಚ್ಚಗಳನ್ನು ಭರಿಸಲು ರೂ.65.00 ಲಕ್ಷಗಳನ್ನು ಸುವರ್ಣ ಕರ್ನಾಟಕದ ಯೋಜನೆಯಡಿ ಮಂಜೂರು ಮಾಡುವಂತೆ ಪ್ರಸ್ತಾವನೆಯನ್ನು ಸಲ್ಲಿಸಿದ್ದಾರೆ ಹಾಗೂ ದಿಬ್ಬಣ ಕಾರ್ಯಕ್ರಮಗಳನ್ನು ಸಂಘಟಿಸುವ ಸಂಬಂಧದಲ್ಲಿ ಸುವರ್ಣ ಸಂಸ್ಕೃತಿ ದಿಬ್ಬಣದ (1) ಉನ್ನತ ಮಟ್ಟದ ಸಮಿತಿ (2) ಕಾರ್ಯಕಾರಿ ಸಮಿತಿ (3) ಕಾರ್ಯಕ್ರಮ ಸಮಿತಿ ಹಾಗೂ (4) ಜಿಲ್ಲಾಮಟ್ಟದ ಸಮಿತಿಗಳನ್ನು ರಚಿಸಿಕೊಳ್ಳುವ ಸಲುವಾಗಿ ಸಹ ಪ್ರಸ್ತಾವನೆ ಸಲ್ಲಿಸಿದ್ದಾರೆ. ಪ್ರಸ್ತಾವನೆಯನ್ನು ಸರ್ಕಾರ ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶ ನೀಡಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಂಕಇ 136 ಕರಅ 2005, ಬೆಂಗಳೂರು, ದಿನಾಂಕ:29ನೇ ಜುಲೈ, 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಅಕ್ಟೋಬರ್ 4 ರಿಂದ ಹೊರಡುವ ಸುವರ್ಣ ಸಾಂಸ್ಕೃತಿಕ ದಿಬ್ಬಣ ಕಾರ್ಯಕ್ರಮ ಸಂಘಟಿಸಲು ಅನುಬಂಧದಲ್ಲಿರುವಂತೆ ವಿವಿಧ ಸಮಿತಿಗಳನ್ನು ರಚಿಸಲು ಹಾಗೂ ಈ ಕಾರ್ಯಕ್ರಮಕ್ಕೆ ರೂ.65.00 ಲಕ್ಷಗಳ ವೆಚ್ಚವನ್ನು ಭರಿಸಲು ಅನುಮತಿಸಲಾಗಿದೆ. ಸದರಿ ರೂ.65.00 ಲಕ್ಷಗಳ ಪೈಕಿ ರೂ.50.00 ಲಕ್ಷ (ರೂಪಾಯಿ ಐವತ್ತು ಲಕ್ಷಗಳು ಮಾತ್ರ)ಗಳನ್ನು ಆಯುಕ್ತರು, ಸುವರ್ಣ ಕರ್ನಾಟಕ, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು ಇವರಿಗೆ ಅನುದಾನವಾಗಿ ಮಂಜೂರು ಮಾಡಲಾಗಿದೆ.

ಈ ವೆಚ್ಚವನ್ನು 2006-07ನೇ ಸಾಲಿನ ಆಯವ್ಯಯ ಲೆಕ್ಕಶೀರ್ಷಿಕೆ 2205-00-102-4-09-059 (ಯೋಜನೆ) ಅಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ: ಇಡಿ 564 ಐಎಎಫ್(ಬಿಎ), ದಿನಾಂಕ:11.07.2006ರ ಸಹಮತಿಯಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಟಿ.ಕೆ. ರಾಮಚಂದ್ರ**
ಸರ್ಕಾರದ ಅಧೀನ ಕಾರ್ಯದರ್ಶಿ(ಪ್ರ),
ಕನ್ನಡ ಮತ್ತು ಸಂಸ್ಕೃತಿ, ವಾರ್ತಾ
ಮತ್ತು ಪ್ರವಾಸೋದ್ಯಮ ಇಲಾಖೆ.

**ಅನುಬಂಧ**

**ಸರ್ಕಾರಿ ಆದೇಶ ಸಂಖ್ಯೆ: ಸಂಕಇ 136 ಕರಅ 2005, ದಿನಾಂಕ:29ನೇ ಜುಲೈ, 2006ಕ್ಕೆ ಅನುಬಂಧ**

**1. ಸುವರ್ಣ ಕರ್ನಾಟಕ ಸಂಸ್ಕೃತಿ ದಿಬ್ಬಣದ ಉನ್ನತ ಮಟ್ಟದ ಸಮಿತಿ**

ಈ ಉನ್ನತ ಸಮಿತಿಯು ದಿಬ್ಬಣದ ಸ್ವರೂಪ ನೀತಿಯನ್ನು ನಿರ್ಧರಿಸುವುದು.

| | |
|---|---|
| ಅ) ಕನ್ನಡ ಮತ್ತು ಸಂಸ್ಕೃತಿ ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ ಕಾರ್ಯದರ್ಶಿಗಳು. | ಅಧ್ಯಕ್ಷರು |
| ಆ) ಎಲ್ಲಾ ಅಕಾಡೆಮಿಗಳ ಅಧ್ಯಕ್ಷರು ಕನ್ನಡ ಪುಸ್ತಕ ಪ್ರಾಧಿಕಾರದ ಅಧ್ಯಕ್ಷರು ಹಾಗೂ ರಂಗಾಯಣದ ನಿರ್ದೇಶಕರು. | ಸದಸ್ಯರು |
| ಇ) ಪತ್ರಿಕಾ ಅಕಾಡೆಮಿ ಅಧ್ಯಕ್ಷರು | ಸದಸ್ಯರು |
| ಈ) ಆಯುಕ್ತರು ಕನ್ನಡ ಮತ್ತು ಸಂಸ್ಕೃತಿ ಇಲಾಖೆ | ಸದಸ್ಯ ಕಾರ್ಯದರ್ಶಿಗಳು. |

**2. ಕಾರ್ಯದರ್ಶಿ ಸಮಿತಿ**

ಕಾರ್ಯಕಾರಿ ಸಮಿತಿಯು ಆಗಾಗ ಸಭೆ ಸೇರಿ ಉನ್ನತ ಸಮಿತಿ ನೀಡಿದ ಸಲಹೆ ಸೂಚನೆ ಮೇರೆಗೆ ದಿಬ್ಬಣದ ಸಂಪೂರ್ಣ ಅನುಷ್ಠಾನದ ಮೇಲ್ವಿಚಾರಣೆ ಮಾಡುವುದು.

| | |
|---|---|
| ಅ) ಆಯುಕ್ತರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ | ಅಧ್ಯಕ್ಷರು |
| ಆ) ಕರ್ನಾಟಕ ನಾಟಕ ಅಕಾಡೆಮಿ ಅಧ್ಯಕ್ಷರು | ಸದಸ್ಯರು |
| ಇ) ಕನ್ನಡ ಪುಸ್ತಕ ಪ್ರಾಧಿಕಾರದ ಅಧ್ಯಕ್ಷರು | ಸದಸ್ಯರು |
| ಈ) ವಾರ್ತಾ ಇಲಾಖೆ ನಿರ್ದೇಶಕರು | ಸದಸ್ಯರು |
| ಉ) ಜಂಟಿ ನಿರ್ದೇಶಕರು (ಆಡಳಿತ) ಕನ್ನಡ ಮತ್ತು ಸಂಸ್ಕೃತಿ, ಇಲಾಖೆ | ಸದಸ್ಯ ಕಾರ್ಯದರ್ಶಿಗಳು |

**3. ಕಾರ್ಯಕ್ರಮ ಸಮಿತಿ**

ಕಾರ್ಯಕಾರಿ ಸಮಿತಿಯು ಪ್ರತಿ ಜಿಲ್ಲೆ ಮತ್ತು ತಾಲ್ಲೂಕುಗಳಲ್ಲಿ ಹಾಗೂ ಜಾಥಾ ಮಾರ್ಗದಲ್ಲಿ ಏರ್ಪಡಿಸಬಹುದಾದ ಕಾರ್ಯಕ್ರಮಗಳ ಸ್ವರೂಪ ಕಲಾವಿದರ ಆಯ್ಕೆ ಬಗ್ಗೆ ಸಲಹೆ ಸೂಚನೆಗಳನ್ನು ನೀಡುವುದು.

| | |
|---|---|
| ಅ) ಆಯುಕ್ತರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ | ಅಧ್ಯಕ್ಷರು |
| ಆ) ಎಲ್ಲಾ ಅಕಾಡೆಮಿಗಳ ಅಧ್ಯಕ್ಷರು | ಸದಸ್ಯರು |
| ಇ) ಕನ್ನಡ ಪುಸ್ತಕ ಪ್ರಾಧಿಕಾರದ ಅಧ್ಯಕ್ಷರು | ಸದಸ್ಯರು |
| ಉ) ಜಂಟಿ ನಿರ್ದೇಶಕರು (ಆಡಳಿತ) ಕನ್ನಡ ಮತ್ತು ಸಂಸ್ಕೃತಿ ಇಲಾಖೆ | ಸದಸ್ಯ ಕಾರ್ಯದರ್ಶಿಗಳು |

**4. ಜಿಲ್ಲಾ ಮಟ್ಟದ ಸಮಿತಿ**

ಜಿಲ್ಲಾ ಮತ್ತು ತಾಲ್ಲೂಕು ಮಟ್ಟದ ದಿಬ್ಬಣದ ಸಂಪೂರ್ಣ ನಿರ್ವಹಣೆಗಾಗಿ ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಸಮಿತಿ ಈ ಕೆಳಕಂಡಂತಿರುವುದು.

| | |
|---|---|
| ಅ) ಜಿಲ್ಲಾಧಿಕಾರಿಗಳು | ಅಧ್ಯಕ್ಷರು |
| ಆ) ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳು | ಸದಸ್ಯರು |
| ಇ) ಜಿಲ್ಲಾ ಪೊಲೀಸ್ ವರಿಷ್ಠಾಧಿಕಾರಿಗಳು | ಸದಸ್ಯರು |
| ಈ) ಜಿಲ್ಲಾ ವ್ಯಾಪ್ತಿಯಲ್ಲಿ ಬರುವ ಎಲ್ಲಾ ಅಕಾಡೆಮಿಗಳ ಪುಸ್ತಕ ಪ್ರಾಧಿಕಾರದ ಹಾಗೂ ರಂಗಾಯಣದ ಸದಸ್ಯರುಗಳು | ಸದಸ್ಯರು |
| ಉ) ಕರ್ನಾಟಕ ಸಾಹಿತ್ಯ ಪರಿಷತ್ತಿನ ಜಿಲ್ಲಾ ಘಟಕಗಳ ಅಧ್ಯಕ್ಷರು | ಸದಸ್ಯರು |
| ಊ) ಜಿಲ್ಲಾ ಪತ್ರಕರ್ತರ ಸಂಘದ ಅಧ್ಯಕ್ಷರು | ಸದಸ್ಯರು |
| ಋ) ಜಿಲ್ಲಾ ವಾರ್ತಾ ಅಧಿಕಾರಿಗಳು ಹಾಗೂ ಪ್ರವಾಸೋದ್ಯಮ ಅಧಿಕಾರಿಗಳು | ಸದಸ್ಯರು |
| ಎ) ಜಿಲ್ಲಾ ಸಹಾಯಕ ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ | ಸದಸ್ಯ ಕಾರ್ಯದರ್ಶಿಗಳು |
| ಏ) ಪ್ರಮುಖ ಸಂಘ ಸಂಸ್ಥೆಗಳ ಪ್ರತಿನಿಧಿಗಳನ್ನು (ಕೊಆಪ್ಟ್ ಮಾಡುವುದು) | ಸದಸ್ಯರುಗಳು |

**ಟಿ.ಕೆ. ರಾಮಚಂದ್ರ**
ಸರ್ಕಾರದ ಅಧೀನ ಕಾರ್ಯದರ್ಶಿ(ಪ್ರ),
ಕನ್ನಡ ಮತ್ತು ಸಂಸ್ಕೃತಿ, ವಾರ್ತಾ
ಮತ್ತು ಪ್ರವಾಸೋದ್ಯಮ ಇಲಾಖೆ.

ಪಿ.ಆರ್. 1209

## ಕಂದಾಯ ಸಚಿವಾಲಯ

**ವಿಷಯ:** ಆಂಧ್ರಪ್ರದೇಶದ ತಿರುಮಲ-ತಿರುಪತಿಯಲ್ಲಿನ ಕರ್ನಾಟಕ ರಾಜ್ಯ ಛತ್ರದ ಅಭಿವೃದ್ಧಿ ಟ್ರಸ್ಟನ್ನು ನಿರಸನಗೊಳಿಸುವ ಬಗ್ಗೆ.

**ಪ್ರಸ್ತಾವನೆ:**

1. ತಿರುಮಲ-ತಿರುಪತಿಯ ಕರ್ನಾಟಕ ರಾಜ್ಯ ಛತ್ರಗಳು ಶತಮಾನದ ಕಾಲದಿಂದ ಧಾರ್ಮಿಕ ದತ್ತಿ ಆಯುಕ್ತರ ಆಡಳಿತ ನಿರ್ವಹಣೆಯಲ್ಲಿ ಇರುತ್ತವೆ. 1913ರ ಮೈಸೂರು ಮುಜರಾಯಿ ರೆಗ್ಯುಲೇಷನ್ ಕಲಂ 2(1) ರನ್ವಯ ಹಾಗೂ ತದನಂತರ ಜಾರಿಗೆ ಬಂದ ಮೈಸೂರು ಧಾರ್ಮಿಕ ಮತ್ತು ಧರ್ಮಾರ್ಥ ಸಂಸ್ಥೆಗಳ ಕಾಯ್ದೆ 1927 ರನ್ವಯ ಈ ಛತ್ರಗಳ ಆಡಳಿತವನ್ನು ಮುಜರಾಯಿ ಆಯುಕ್ತರು ನಿರ್ವಹಿಸುತ್ತಿದ್ದು ಅದೇ ಕಾಯ್ದೆಯಡಿ ಈಗಲೂ ಆಡಳಿತವನ್ನು ನಡೆಸಲಾಗುತ್ತಿದೆ.

2. ಕರ್ನಾಟಕ ರಾಜ್ಯ ಛತ್ರದ ತಿರುಪತಿಯಲ್ಲಿರುವ ಕಟ್ಟಡಗಳ ನವೀಕರಣ/ ವಿಸ್ತರಣೆ ಮಾಡುವ ಹಾಗೂ ನಿರ್ವಹಿಸುವ ಉದ್ದೇಶದಿಂದ ದಿನಾಂಕ:29.04.2003 ರಂದು ಕಂದಾಯ ಕಾರ್ಯದರ್ಶಿಯವರು ಟ್ರಸ್ಟ್ ಡೀಡ್ ಒಂದನ್ನು ನೊಂದಾಯಿಸಿರುತ್ತಾರೆ. ಈ ಡೀಡ್‌ನನ್ವಯ ರಚಿಸಲಾದ

ಟ್ರಸ್ಟ್ ಮಂಡಳಿಯು ಹಿಂದಿನ ಮೂರು ವರ್ಷಗಳಲ್ಲಿ ಕಟ್ಟಡ ನಿರ್ಮಾಣದ/ ನವೀಕರಣದ ಬಗ್ಗೆ ಕೆಲವೊಂದು ಕಾರ್ಯಕ್ರಮಗಳನ್ನು ಕೈಗೊಂಡಿದ್ದರೂ ಸಹ ಟ್ರಸ್ಟ್ ರಚಿಸುವ ಹಿಂದಿನ ಮೂಲ ಉದ್ದೇಶಗಳನ್ನು ಸಫಲಗೊಳಿಸುವುದರಲ್ಲಿ ಸಾಧ್ಯವಾಗಲಿಲ್ಲ.

3. ಟ್ರಸ್ಟ್‌ನ್ನು ರಚಿಸುವ ಬಗ್ಗೆ ಪರಿಶೀಲಿಸಲಾಗಿ ಹಲವಾರು ಕಾನೂನಿನ ತೊಡಕುಗಳು ಕಂಡುಬಂದಿವೆ. ಮುಖ್ಯವಾಗಿ ಟ್ರಸ್ಟ್‌ನ್ನು ರಚಿಸುವ ಮುಂಚೆ ಸಕ್ಷಮ ಪ್ರಾಧಿಕಾರದಿಂದ ಒಪ್ಪಿಗೆ ಪಡೆದಿರುವುದಿಲ್ಲ. ಆದುದರಿಂದ ಸದರೀ ಟ್ರಸ್ಟ್‌ನ್ನು ರಚಿಸಿದ ರೀತಿ ab-initio ಕಾನೂನು ಬಾಹಿರವಾಗಿರುತ್ತದೆ. ಎರಡನೆಯದಾಗಿ, ಸದರೀ ಆಸ್ತಿಗಳನ್ನು 1913ರ ಮೈಸೂರು ಮುಜರಾಯಿ ರೆಗ್ಯುಲೇಷನ್‌ನ್ವಯ ನೇರವಾಗಿ ಮುಜರಾಯಿ ಆಯುಕ್ತರ ಸುಪರ್ದಿಯಲ್ಲಿ ನಡೆಸುತ್ತಿದ್ದು ತದನಂತರ ಜಾರಿಗೆ ಬಂದ 1927ರ ಕಾಯ್ದೆಯಡಿ ಸಹ ಆ ವ್ಯವಸ್ಥೆ ಮುಂದುವರಿದಿರುವುದರಿಂದ ಹಾಗೂ 1927ರ ಕಾಯ್ದೆಯನ್ನು ನಿರಸನಗೊಳಿಸಿದ ನಂತರ ಸಹ ಛತ್ರದ ಆಡಳಿತವನ್ನು 1927 ಕಾಯ್ದೆಯನ್ವಯವೇ ಮಾಡುತ್ತಿರುವುದರಿಂದ ಕಾನೂನು ಬಾಹಿರವಾಗಿ ರಚಿಸಲಾದ ಟ್ರಸ್ಟಿಗೆ ಸದರಿ ಆಸ್ತಿಯನ್ನು ಹಸ್ತಾಂತರಿಸಲು ಕಾನೂನು ರೀತ್ಯ ಅವಕಾಶವಿರುವುದಿಲ್ಲ. ಮೇಲಾಗಿ ಟ್ರಸ್ಟ್ ರಚನೆಯಾದ ನಂತರ ಹಿಂದಿನ ಮೂರು ವರ್ಷಗಳಲ್ಲಿ ಟ್ರಸ್ಟ್‌ನ ಉದ್ದೇಶಗಳನ್ನು ಪೂರೈಸುವ ದಿಸೆಯಲ್ಲಿ ಯಾವುದೇ ಮಹತ್ತರ ಕಾರ್ಯವು ಆಗಿರುವುದಿಲ್ಲ. ಟ್ರಸ್ಟ್‌ನ ವತಿಯಿಂದ ಕೈಗೊಂಡ ಸಂಗ್ರಹಣಾ ಕಾರ್ಯದಲ್ಲಿ 08.04.2005ರ ವರೆಗೂ ರೂ.20.28 ಲಕ್ಷ ಸಂಗ್ರಹಣೆಯಾಗಿದ್ದು ಇವುಗಳ ಲೆಕ್ಕವನ್ನು ಟ್ರಸ್ಟ್‌ನ ಕಾರ್ಯದರ್ಶಿಯಾಗಿರುವ ಮುಜರಾಯಿ ಆಯುಕ್ತರ ಕಛೇರಿಯಲ್ಲಿ ಇಡಲಾಗಿದೆ. ತದನಂತರ ಡಿಸೆಂಬರ್ 2005ರಲ್ಲಿ ಇಬ್ಬರು ಟ್ರಸ್ಟಿಗಳಿಂದ ತಲಾ ರೂ.50.00 ಲಕ್ಷಗಳಂತೆ ರೂ.1.00 ಕೋಟಿಗಳನ್ನು ಟ್ರಸ್ಟ್‌ನ ಹೆಸರಿನಲ್ಲಿ ದೇಣಿಗೆ ಪಡೆಯಲಾಗಿದೆ.

4. ಟ್ರಸ್ಟನ್ನು ರಚಿಸುವಲ್ಲಿ ಆಗಿರುವ ಲೋಪದೋಷಗಳನ್ನು ಗಮನದಲ್ಲಿಟ್ಟುಕೊಂಡು ಟ್ರಸ್ಟ್‌ನ ಅವಶ್ಯಕತೆಯ ಬಗ್ಗೆ ಸರ್ಕಾರವು ಪುನರ್ ವಿಮರ್ಶಿಸಿ ಮತ್ತು ಟ್ರಸ್ಟ್‌ನ್ನು ನಿರಸನಗೊಳಿಸಲು ತೀರ್ಮಾನಿಸಿದೆ. ಆದಕಾರಣ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಕಂಇ:23:ಮುಆಕಾ 2002, ಬೆಂಗಳೂರು, ದಿನಾಂಕ:3ನೇ ಆಗಸ್ಟ್, 2006**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ ಆಂಧ್ರಪ್ರದೇಶದ ತಿರುಮಲ-ತಿರುಪತಿಯಲ್ಲಿ ಕರ್ನಾಟಕ ರಾಜ್ಯ ಛತ್ರದ ಅಭಿವೃದ್ಧಿ ಕಾರ್ಯಕ್ಕಾಗಿ ರಚಿಸಿದ ತಿರುಮಲ-ತಿರುಪತಿ ಅಭಿವೃದ್ಧಿ ಟ್ರಸ್ಟನ್ನು ತಕ್ಷಣದಿಂದ ಜಾರಿಗೆ ಬರುವಂತೆ ನಿರಸನಗೊಳಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಲ್. ಷಣ್ಮುಖ**

ಪಿ.ಆರ್. 1210

ಸರ್ಕಾರದ ಉಪ ಕಾರ್ಯದರ್ಶಿ,
ಕಂದಾಯ ಇಲಾಖೆ, (ಮುಜರಾಯಿ)

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** ಶ್ರೀ ತಿಪ್ಪೇಸ್ವಾಮಿ, ಸಹಾಯಕ ನಿರ್ದೇಶಕರು (ನರ್ಸಿಂಗ್ ಮತ್ತು ತರಬೇತಿ), ವೈದ್ಯಕೀಯ ಶಿಕ್ಷಣ ನಿರ್ದೇಶನಾಲಯ, ಇವರ ವಿರುದ್ಧ ದಾಖಲಾದ ಟ್ರ್ಯಾಪ್ ಪ್ರಕರಣದ ಅಭಿಯೋಜನಾ ಮಂಜೂರಾತಿ ಕುರಿತು.

**ಓದಲಾಗಿದೆ:** 1. ಎಡಿಜಿಪಿ, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರ ಸಂಖ್ಯೆ: ಲೋಕ್/ ಐಎನ್‌ವಿ(ಜಿ) ಸಿಟಿ/ ಕ್ರೈಂ.47/ 2005, ದಿನಾಂಕ:18.04.2006.

2. ತನಿಖಾಧಿಕಾರಿಯ ವರದಿ ಸಂಖ್ಯೆ: 47/ 2005, ದಿನಾಂಕ:23.03.2006.
3. ತನಿಖಾ ದಾಖಲೆಗಳ ನಕಲುಗಳಾದ ಫಿರ್ಯಾದು, ಪ್ರಥಮ ವರ್ತಮಾನ ವರದಿ, ಪ್ರಾಯೋಗಿಕ ಪಂಚನಾಮೆ, ಜಪ್ತಿ ಪಂಚನಾಮೆ, ಸ್ವತ್ತುಗಳ ಪಟ್ಟಿ, ರಾಸಾಯನಿಕ ಪರೀಕ್ಷಕರ ವರದಿ, ಸಾಕ್ಷಿದಾರರ ಹೇಳಿಕೆಗಳು, ಲಂಚದ ಬೇಡಿಕೆಗೆ ಸಂಬಂಧಪಟ್ಟ ಕಡತಗಳು.

**ಪೀಠಿಕೆ:**

1) ಶ್ರೀ ತಿಪ್ಪೇಸ್ವಾಮಿ, ಸಹಾಯಕ ನಿರ್ದೇಶಕರು (ನರ್ಸಿಂಗ್ ಮತ್ತು ತರಬೇತಿ), ವೈದ್ಯಕೀಯ ಶಿಕ್ಷಣ ನಿರ್ದೇಶನಾಲಯ, ಇವರ ವಿರುದ್ಧ ಆರಕ್ಷಕ ನಿರೀಕ್ಷಕರು, ಪೊಲೀಸ್ ವಿಭಾಗ, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ನಗರ ಪೊಲೀಸ್ ಠಾಣೆಯಲ್ಲಿ ದಾಖಲಿಸಿರುವ ಗುನ್ನೆ ಸಂಖ್ಯೆ:47/ 2005ರ ಪ್ರಕರಣದ ತನಿಖಾಧಿಕಾರಿಯ ಅಂತಿಮ ವರದಿಯ ನಕಲು ಮತ್ತು ತನಿಖಾ ದಾಖಲಾತಿಗಳನ್ನು (ಉಲ್ಲೇಖ-2,3) ಮಾನ್ಯ ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ತಮ್ಮ ಪತ್ರ ದಿನಾಂಕ:18.04.2006 (ಉಲ್ಲೇಖ-1) ರೊಡನೆ ಕಳುಹಿಸುತ್ತಾ ಆಪಾದಿತನನ್ನು ಘನ ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಿಸಲು ಲಂಚ ನಿರೋಧಕ ಕಾಯ್ದೆ 1988ರ 19(1)(ಬಿ) ಕಲಂನ ಅಡಿಯಲ್ಲಿ ಮಂಜೂರಾತಿಗಾಗಿ ಸರ್ಕಾರವನ್ನು ಕೋರಿರುತ್ತಾರೆ.

2) ಸಕ್ಷಮ ಪ್ರಾಧಿಕಾರಿಯಾದ ಸರ್ಕಾರವು ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ತಮ್ಮ ಉಲ್ಲೇಖಿತ ಪತ್ರ ಸಂಖ್ಯೆ: ಲೋಕ್/ ಐಎನ್‌ವಿ/ (ಜಿ)/ ಸಿಟಿ/ ಕ್ರೈಂ.47/ 2005, ದಿನಾಂಕ:18.04.2006 ರೊಂದಿಗೆ ಕಳುಹಿಸಿಕೊಟ್ಟ ಕೆಳಕಂಡ ದಾಖಲಾತಿಗಳನ್ನು ಪರಿಶೀಲಿಸಿದೆ.

1. ಶ್ರೀ ತಿಮ್ಮರಾಯಪ್ಪ ಬಿನ್ ದಿ:ರಾಮಣ್ಣ, ಐಮರೆಡ್ಡಿಹಳ್ಳಿ, ಕಸಬಾ ಹೋಬಳಿ, ಚಿಂತಾಮಣಿ ತಾಲ್ಲೂಕು ಇವರ ಫಿರ್ಯಾದಿ ದಿನಾಂಕ:16.11.2005.
2. ಪ್ರಥಮ ವರ್ತಮಾನ ವರದಿ ನಗರ ವಿಭಾಗ, ಕರ್ನಾಟಕ ಲೋಕಾಯುಕ್ತ, ಬೆಂಗಳುರು ಪೊಲೀಸ್ ಠಾಣೆ ಪ್ರಕರಣ ಸಂಖ್ಯೆ:47/ 2005.
3. ಪ್ರಾಯೋಗಿಕ ಪಂಚನಾಮೆ ದಿನಾಂಕ:16.11.2005.
4. ಟ್ರ್ಯಾಪ್‌ನ ಮಹಜರ್ ದಿನಾಂಕ:16.11.2005.
5. ರಾಸಾಯನಿಕ ಪರೀಕ್ಷಕರ ಪರೀಕ್ಷಣಾ ವರದಿ ಸಂಖ್ಯೆ: ಪಿಹೆಚ್‌ಐ/ ಸಿಎಂಇ/ ಲೋಕ್/ 90/ 05-06, ದಿನಾಂಕ:21.12.2005.
6. ಕೃತ್ಯ ನಡೆದ ಸ್ಥಳದ ನಕಾಶೆ.
7. ಸಾಕ್ಷಿಗಳ ಹೇಳಿಕೆಗಳು.

(ಅ) ಶ್ರೀ ಬಿ.ಆರ್. ಮುರಳಿರಾಘವ್.
(ಆ) ಶ್ರೀ ಶಿವಣ್ಣ

(ಇ) ಶ್ರೀ ಮೂಡಲಗಿರಿ.
(ಈ) ಶ್ರೀ ಎಂ.ಹೆಚ್. ಬನ್ನ.
(ಉ) ಶ್ರೀ ಎಂ. ಶಂಕರಪ್ಪ.
(ಊ) ಶ್ರೀ ಎಸ್.ಪಿ. ಪರಮೇಶ್.
(ಋ) ಶ್ರೀ ಎ.ಎನ್. ರಾಜಣ್ಣ.

8. ಲಂಚ ಕೇಳಲು ಆಧಾರವಾದ ಕಡತ ಅಥವಾ ದಾಖಲೆಗಳ ಸಂಖ್ಯೆ: ವೈಶಿನಿ/ ಎನ್‌ಆರ್‌ಸಿ(2)/ 19/ 2005-06 ವಿಷಯ: ಕು: ಉಮಾ.ಎಸ್.ಜಿ. ಇವರ ವಿದ್ಯಾಭ್ಯಾಸವನ್ನು ಕೋಲಾರದ ಪವನ್ ನರ್ಸಿಂಗ್ ಕಾಲೇಜಿನಿಂದ ಚಿಂತಾಮಣಿಯ ಫಿಲೋಮಿನಾ ನರ್ಸಿಂಗ್ ಕಾಲೇಜಿಗೆ ವರ್ಗಾವಣೆ ಕೋರಿಕೆ ಬಗ್ಗೆ.

9. ಆಪಾದಿತರ ಸಮಜಾಯಿಷಿ ಹೇಳಿಕೆಗಳು.

3) ತನಿಖಾಧಿಕಾರಿಗಳಾದ ಶ್ರೀ ಎಂ.ಜಿ. ಸುಬ್ಬರಾವ್, ಪೊಲೀಸ್ ಇನ್ಸ್‌ಪೆಕ್ಟರ್, ನಗರ ವಿಭಾಗ, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ಶ್ರೀ ತಿಪ್ಪೇಸ್ವಾಮಿ, ಸಹಾಯಕ ನಿರ್ದೇಶಕರು (ನರ್ಸಿಂಗ್ ಮತ್ತು ತರಬೇತಿ) ವೈದ್ಯಕೀಯ ಶಿಕ್ಷಣ ನಿರ್ದೇಶನಾಲಯ ಇವರ ವಿರುದ್ಧ ದಂಡಾರ್ಹ ಪ್ರಕರಣವನ್ನು ಕರ್ನಾಟಕ ಲೋಕಾಯುಕ್ತ, ನಗರ ವಿಭಾಗ ಠಾಣೆಯಲ್ಲಿ ಗುನ್ನೆ ಸಂಖ್ಯೆ:47/ 2005ರಲ್ಲಿ ಭ್ರಷ್ಟಾಚಾರ ನಿರ್ಮೂಲನಾ ಕಾಯ್ದೆ 1988ರ ಕಲಂ 7, 13 (1)(ಡಿ) ಜೊತೆಯಲ್ಲಿ ಓದಲಾದ 13 (2)ರ ಅಡಿಯಲ್ಲಿ ದಾಖಲಿಸಿಕೊಂಡಿರುತ್ತಾರೆ.

4) ಆಪಾದಿತರಾದ ಶ್ರೀ ತಿಪ್ಪೇಸ್ವಾಮಿ, ಸಹಾಯಕ ನಿರ್ದೇಶಕರು (ನರ್ಸಿಂಗ್ ಮತ್ತು ತರಬೇತಿ) ವೈದ್ಯಕೀಯ ಶಿಕ್ಷಣ ನಿರ್ದೇಶನಾಲಯ, ಫಿರ್ಯಾದಿಯಾದ ಶ್ರೀ ತಿಮ್ಮರಾಯಪ್ಪ ಬಿನ್ ಲೇಟ್ ರಾಮಣ್ಣ, 49 ವರ್ಷಗಳು, ಐಮರೆಡ್ಡಿಹಳ್ಳಿ, ಕಸಬಾ ಹೋಬಳಿ, ಚಿಂತಾಮಣಿ ತಾಲ್ಲೂಕು, ಕೋಲಾರ ಜಿಲ್ಲೆ ಇವರ ನಾದಿನಿಯ ಮಗಳಾದ ಕು:ಎಸ್.ಜೆ. ಉಮಾರವರಿಗೆ ಕೋಲಾರದ ಪವನ್ ನರ್ಸಿಂಗ್ ಶಾಲೆಯಿಂದ ಚಿಂತಾಮಣಿಯಲ್ಲಿರುವ ಫಿಲೋಮಿನಾ ನರ್ಸಿಂಗ್ ಶಾಲೆಗೆ ವಿದ್ಯಾಭ್ಯಾಸಕ್ಕಾಗಿ ವರ್ಗಾವಣೆ ಮಾಡಲು ರೂ.20,000/-ಗಳ ಅಕ್ರಮ ಸಂಭಾವನೆಯನ್ನು ಕೇಳಿರುತ್ತಾರೆ. ಫಿರ್ಯಾದಿಯು ಲಂಚವನ್ನು ಕೊಡಲು ಬಯಸದ ಕಾರಣ ಸದರಿ ಸರ್ಕಾರಿ ಅಧಿಕಾರಿಯ ವಿರುದ್ಧ ಕಾನೂನು ಕ್ರಮ ಕೈಗೊಳ್ಳುವ ಬಗ್ಗೆ ದೂರನ್ನು ಸಲ್ಲಿಸಿದ್ದು ಇರುತ್ತದೆ. ಸದರಿ ದೂರಿನಂತೆ ತನಿಖಾಧಿಕಾರಿಗಳು ಬಲೆ ಬೀಸುವ ಮೊದಲಿನ ಎಲ್ಲಾ ಔಚಿತ್ಯಪೂರ್ಣ ಕಾರ್ಯಕ್ರಮಗಳನ್ನು ನೆರವೇರಿಸಿದ ನಂತರ ದಿನಾಂಕ:16.11.2005ರಂದು ಬೆಂಗಳೂರು ನಗರ, ಆನಂದ್ ರಾವ್ ವೃತ್ತ, ವೈದ್ಯಕೀಯ ಶಿಕ್ಷಣ ನಿರ್ದೇಶನಾಲಯ, ಸಹಾಯಕ ನಿರ್ದೇಶಕರು (ನರ್ಸಿಂಗ್ ಮತ್ತು ತರಬೇತಿ) ರವರ ಕಛೇರಿಯಲ್ಲಿ ಬೀಸಿದ ಟ್ರ್ಯಾಪ್ ಯಶಸ್ವಿಯಾಗಿ ಶ್ರೀ ತಿಪ್ಪೇಸ್ವಾಮಿ, ಸಹಾಯಕ ನಿರ್ದೇಶಕರು (ನರ್ಸಿಂಗ್ ಮತ್ತು ತರಬೇತಿ) ವೈದ್ಯಕೀಯ ಶಿಕ್ಷಣ ನಿರ್ದೇಶನಾಲಯ ಇವರು ಅಕ್ರಮ ಸಂಭಾವನೆಯಾದ ರೂ.15,000/-ಗಳನ್ನು ಸದರಿ ಸರ್ಕಾರಿ ಕೆಲಸವನ್ನು ಮಾಡಲು ಕೇಳಿ ಪಡೆಯುತ್ತಿದ್ದಾಗ ಸಿಕ್ಕಿಹಾಕಿಕೊಂಡಿರುತ್ತಾರೆ. ನೆರಳು ಸಾಕ್ಷಿಯು ಅಕ್ರಮ ಸಂಭಾವನೆಯ ಬೇಡಿಕೆ ಮತ್ತು ಪಡೆಯುವಿಕೆಗೆ ಸಂಬಂಧಿಸಿದಂತೆ ಫಿರ್ಯಾದಿ ಹಾಗೂ ಆಪಾದಿತ ಸಾರ್ವಜನಿಕ ಅಧಿಕಾರಿ ನಡುವಿನ ವ್ಯವಹಾರವನ್ನು ಗಮನಿಸಿರುತ್ತಾರೆ ಮತ್ತು ಸಂಭಾವನೆಯನ್ನು ಆಲಿಸಿರುತ್ತಾರೆ. ಅಕ್ರಮ ಸಂಭಾವನೆಯಾದ ರೂ.15,000/- ಗಳನ್ನು ಶ್ರೀ ತಿಪ್ಪೇಸ್ವಾಮಿ, ಸಹಾಯಕ ನಿರ್ದೇಶಕರು (ನರ್ಸಿಂಗ್ ಮತ್ತು ತರಬೇತಿ) ವೈದ್ಯಕೀಯ ಶಿಕ್ಷಣ ನಿರ್ದೇಶನಾಲಯ ಇವರಿಂದ ಬೆಂಗಳೂರು ನಗರ, ಆನಂದ್ ರಾವ್ ವೃತ್ತ, ವೈದ್ಯಕೀಯ ಶಿಕ್ಷಣ ನಿರ್ದೇಶನಾಲಯ, ಸಹಾಯಕ ನಿರ್ದೇಶಕರು (ನರ್ಸಿಂಗ್ ಮತ್ತು ತರಬೇತಿ) ರವರ ಕಛೇರಿಯಲ್ಲಿ ಪಂಚರ ಸಮಕ್ಷಮ ವಶಪಡಿಸಿಕೊಳ್ಳಲಾಗಿದೆ.

5) ಈ ಎಲ್ಲಾ ಕಾರಣಗಳಿಂದ ಆಪಾದಿತರು ಲಂಚ ನಿರೋಧಕ ಕಾಯ್ದೆ 1988ರ ಕಲಂ 7, 13(1)(ಡಿ)ರ ಜೊತೆಗೆ ಓದಲಾದ ಕಲಂ 13(2)ರ ಅಡಿಯಲ್ಲಿ ಶಿಕ್ಷಾರ್ಹ ಅಪರಾಧವನ್ನು ಎಸಗಿರುವುದು ಮೇಲ್ನೋಟಕ್ಕೆ ಸರ್ಕಾರಕ್ಕೆ ಸಂಪೂರ್ಣವಾಗಿ ಮನವರಿಕೆಯಾಗಿದೆ. ಆದ್ದರಿಂದ ಇವರನ್ನು ಲಂಚನಿರೋಧಕ ಕಾಯ್ದೆ 1988ರ ಅನ್ವಯ ಕಲಂ 7, 13(1)(ಡಿ) ಮತ್ತು ಜೊತೆಗೆ 13(2)ರ ಅಡಿಯಲ್ಲಿ ಅಭಿಯೋಜನೆಗೆ ಒಳಪಡಿಸುವುದು ಅವಶ್ಯ ಎಂದು ಸರ್ಕಾರ ಮನಗಂಡಿದೆ.

6) ಸಕ್ಷಮ ಪ್ರಾಧಿಕಾರವಾದ ಸರ್ಕಾರ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳ ಅಡಿಯಲ್ಲಿ ಸರ್ಕಾರವು ಆಪಾದಿತನನ್ನು ಕೆಲಸದಿಂದ ತೆಗೆದು ಹಾಕಲು ಅಧಿಕಾರವುಳ್ಳವದ್ದಾಗಿರುತ್ತದೆ. ಆದ್ದರಿಂದ, ಲಂಚ ನಿರೋಧಕ ಕಾಯ್ದೆ 1988ರ ಕಲಂ 19(ಬಿ)ರ ಅಡಿ ಆಪಾದಿತ ಸಾರ್ವಜನಿಕ ಅಧಿಕಾರಿ ಶ್ರೀ ತಿಪ್ಪೇಸ್ವಾಮಿ, ಸಹಾಯಕ ನಿರ್ದೇಶಕರು (ನರ್ಸಿಂಗ್ ಮತ್ತು ತರಬೇತಿ) ವೈದ್ಯಕೀಯ ಶಿಕ್ಷಣ ನಿರ್ದೇಶನಾಲಯ, ಬೆಂಗಳೂರು ಇವರನ್ನು ಕಲಂ7 ಮತ್ತು 13(1)(ಡಿ) ಜೊತೆಗೆ 13(2)ರ ಅಡಿಯಲ್ಲಿ ಅಭಿಯೋಜನೆಗೆ ಒಳಪಡಿಸಲು ಮಂಜೂರಾತಿ ನೀಡುವ ಅಧಿಕಾರವನ್ನು ಸರ್ಕಾರ ಹೊಂದಿರುತ್ತದೆ. ಅದರಂತೆ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಆಕುಕ 163 ಎಂಎಂಸಿ 2005, ಬೆಂಗಳೂರು, ದಿನಾಂಕ:28ನೇ ಜುಲೈ, 2006**

7) ಆರೋಪಿಯಾದ ಶ್ರೀ ತಿಪ್ಪೇಸ್ವಾಮಿ, ಸಹಾಯಕ ನಿರ್ದೇಶಕರು (ನರ್ಸಿಂಗ್ ಮತ್ತು ತರಬೇತಿ) ವೈದ್ಯಕೀಯ ಶಿಕ್ಷಣ ನಿರ್ದೇಶನಾಲಯ, ಬೆಂಗಳೂರು ಇವರನ್ನು ಹುದ್ದೆಯಿಂದ ತೆಗೆದು ಹಾಕುವ (ವಜಾ ಮಾಡುವ) ಅಧಿಕಾರವುಳ್ಳ ಸಕ್ಷಮ ಪ್ರಾಧಿಕಾರವಾದ ಸರ್ಕಾರವು ಶ್ರೀ ತಿಪ್ಪೇಸ್ವಾಮಿ, ಸಹಾಯಕ ನಿರ್ದೇಶಕರು (ನರ್ಸಿಂಗ್ ಮತ್ತು ತರಬೇತಿ) ವೈದ್ಯಕೀಯ ಶಿಕ್ಷಣ ನಿರ್ದೇಶನಾಲಯ, ಬೆಂಗಳೂರು ಇವರನ್ನು ಲಂಚ ನಿರೋಧಕ ಕಾಯ್ದೆ ಕಲಂ 7, 13(1)(ಡಿ) ಜೊತೆಯಲ್ಲಿ ಓದಲಾದ ಕಲಂ 13(2)ರ ಪ್ರಕಾರ ಶಿಕ್ಷಾರ್ಹ ಅಪರಾಧಕ್ಕಾಗಿ ಅಭಿಯೋಗಗೊಳಿಸಲು ಈ ಮೂಲಕ ಮಂಜೂರಾತಿಯನ್ನು ನೀಡಲಾಗಿದೆ.

8) ಮುಂದುವರೆದು, ಕರ್ನಾಟಕ ಸರ್ಕಾರದ (ವ್ಯವಹಾರ) ನಿಯಮಾವಳಿ, 1977ರ ನಿಯಮ 18ರ ಪ್ರಕಾರ ಸರ್ಕಾರದ ಪರವಾಗಿ ಅಥವಾ ಸರ್ಕಾರದಿಂದ ಹೊರಡಿಸಲಾದ ಎಲ್ಲಾ ಆದೇಶಗಳನ್ನು ಅಥವಾ ಲೇಖಗಳನ್ನು ಕರ್ನಾಟಕ ಸರ್ಕಾರದ ರಾಜ್ಯಪಾಲರ ಹೆಸರಿನಲ್ಲಿ ಹೊರಡಿಸಬೇಕು ಅಥವಾ ಹೊರಡಿಸುವಂತೆ ಮಾಡಬೇಕು.

9) ಅದೇ ನಿಯಮಾವಳಿಯ ನಿಯಮ 19(1)ರ ಪ್ರಕಾರ ಕರ್ನಾಟಕ ಸರ್ಕಾರದ ರಾಜ್ಯಪಾಲರ ಹೆಸರಿನಲ್ಲಿ ಹೊರಡಿಸಿದ ಆದೇಶಗಳು ಮತ್ತು ಲೇಖಗಳು ಒಬ್ಬ ಅಧೀನ ಕಾರ್ಯದರ್ಶಿಯ ಸಹಿಯಿಂದ ಅಧಿಕೃತಗೊಳ್ಳಬೇಕು ಹಾಗೂ ಅಂತಹ ಸಹಿಯು ಅಂತಹ ಆದೇಶ ಅಥವಾ ಲೇಖನವನ್ನು ಸರಿಯಾಗಿ ಅಧಿಕೃತಗೊಳಿಸುತ್ತದೆ.

10) ಆದ್ದರಿಂದ, ಕರ್ನಾಟಕ ಸರ್ಕಾರದ (ವ್ಯವಹಾರ) ನಿಯಮಾವಳಿ 1977ರ ಈ ಮೇಲ್ಕಂಡ ಆದೇಶವನ್ನು ನನ್ನ ಕಛೇರಿಯ ಮೊಹರು ಮತ್ತು ನನ್ನ ಸಹಿಯ ಅಡಿಯಲ್ಲಿ ದಿನಾಂಕ:28.07.2006ರಂದು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಡಿ.ಬಿ. ಗಣಾಚಾರಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ
(ವೈದ್ಯಕೀಯ ಶಿಕ್ಷಣ)

ಪಿ.ಆರ್. 1211

## ಇಂಧನ ಸಚಿವಾಲಯ

**ವಿಷಯ:** ಇಂಧನ ಇಲಾಖೆಯ ಪ್ರಧಾನ ಕಾರ್ಯದರ್ಶಿಯವರ ಕಛೇರಿಯ ಉಪಯೋಗಕ್ಕಾಗಿ ಒಂದು ಹೊಸ ಮಾರುತಿ ಎಸ್ಟೀಮ್ ಕಾರನ್ನು ಖರೀದಿಸಲು ಅನುಮತಿ ನೀಡುವುದು ಹಾಗೂ ಹಳೇ ಅಂಬಾಸಿಡರ್ ಕಾರ್ ಸಂಖ್ಯೆ: ಕೆಎ-01-ಜಿ-2264 ನ್ನು ರಾಜ್ಯ ಅತಿಥಿ ಗೃಹಕ್ಕೆ ಒಪ್ಪಿಸುವ ಬಗ್ಗೆ.

**ಓದಲಾಗಿದೆ:** 1. ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ಅಧಿಕೃತ ಜ್ಞಾಪನಾ ಸಂಖ್ಯೆ: ಸಿಆಸುಇ 87 ಶಿವಾನೀ 2000 ದಿನಾಂಕ:29.08.2000.

2. ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ಸುತ್ತೋಲೆ ಸಂಖ್ಯೆ: ಸಿಆಸುಇ 19 ಶಿವಾನೀ 2005 ದಿನಾಂಕ:03.06.2005.

3. ವ್ಯವಸ್ಥಾಪಕರು, ಮೆ: ಮಾಂಡವಿ ಮೋಟಾರ್ಸ್ ಪ್ರೈವೇಟ್ ಲಿಮಿಟೆಡ್, ಬೆಂಗಳೂರು ಇವರು ದಿನಾಂಕ:26.07.2006 ರಂದು ಸಲ್ಲಿಸಿರುವ ಪ್ರೊಫಾರ್ಮ ಇನ್‌ವಾಯ್ಸ್.

**ಪ್ರಸ್ತಾವನೆ:**

ಇಂಧನ ಇಲಾಖೆಯ ಪ್ರಧಾನ ಕಾರ್ಯದರ್ಶಿಯವರ ಕಛೇರಿಯ ಉಪಯೋಗಕ್ಕಾಗಿ ಇರುವ ಅಂಬಾಸಿಡರ್ ಕಾರ್ ಸಂಖ್ಯೆ: ಕೆಎ-01-ಜಿ-2264 (1996ನೇ ಮಾಡಲ್) ಇದ್ದು, ಈ ವಾಹನವು 1,70,000ಕ್ಕೂ ಹೆಚ್ಚು ಕಿಲೋ ಮೀಟರ್ ಕ್ರಮಿಸಿದ್ದು ಇದರ ದುರಸ್ತಿಗಾಗಿ ಈಗಾಗಲೇ ಅಂದಾಜು ರೂ.3,33,224 ಗಳನ್ನು ವೆಚ್ಚ ಮಾಡಲಾಗಿದ್ದು ಈ ವಾಹನವು ಪದೇ ಪದೇ ದುರಸ್ತಿಗೆ ಬರುತ್ತಿದೆ. ಈ ವಾಹನವು ಪ್ರತಿ ಲೀಟರ್‌ಗೆ ಕೇವಲ 7 ಕಿಲೋ ಮೀಟರ್ ಕ್ರಮಿಸುತ್ತಿದ್ದು ಇದು ಮಿತದಾಯಕವಾಗಿರುವುದಿಲ್ಲ ಆದುದರಿಂದ ಪ್ರಧಾನ ಕಾರ್ಯದರ್ಶಿಯವರ ಕಛೇರಿಯ ಉಪಯೋಗಕ್ಕಾಗಿ ಹೊಸ ಮಾರುತಿ ಎಸ್ಟಿಂ ಕಾರ್‌ನ್ನು ಖರೀದಿಸಲು, ಮೇಲೆ ಓದಲಾಗಿರುವ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ (ರಾಜ್ಯ ಶಿಷ್ಟಾಚಾರ) (1) ಮತ್ತು (2)ರ ಅಧಿಕೃತ ಜ್ಞಾಪನ ಮತ್ತು ಸುತ್ತೋಲೆಯ ಅನ್ವಯ ಇಂಧನ ಇಲಾಖೆಯ ಪ್ರಧಾನ ಕಾರ್ಯದರ್ಶಿಯವರ ಕಛೇರಿಯ ಉಪಯೋಗಕ್ಕಾಗಿ ಒಂದು ಮಾರುತಿ ಎಸ್ಟಿಂ ಕಾರನ್ನು DGS & D ದರಗಳಿಗೆ ಒಳಪಟ್ಟು ಖರೀದಿಸಲು ಉದ್ದೇಶಿಸಿ, ಓದಲಾದ (3)ರಲ್ಲಿ ಮೆ: ಮಾಂಡವಿ ಮೋಟಾರ್ಸ್ ಪ್ರೈವೇಟ್ ಲಿಮಿಟೆಡ್, ಬೆಂಗಳೂರು ಇವರಿಂದ ಪ್ರೊಫಾರ್ಮ ಇನ್‌ವಾಯ್ಸ್‌ನ್ನು ದಿನಾಂಕ:27.06.2006 ರಂದು ಪಡೆಯಲಾಗಿದ್ದು ಅದರನ್ವಯ ದರದ ವಿವರವು ಇಂತಿದೆ:

1. Maruti-Esteem MPI VX (BS-III) at DGS & D Rate (without "D" Form)-Rs.4,52,843.60.
2. Maruti-Esteem MPI VX (BS-III) at DGS & D Rate (with "D" Form)-Rs.4,19,560.60

ಮೇಲೆ ಓದಲಾಗಿರುವ (2)ರ ಸುತ್ತೋಲೆ ರನ್ವಯ ಇಲಾಖಾ ಪ್ರಧಾನ ಕಾರ್ಯದರ್ಶಿಗಳು/ ಕಾರ್ಯದರ್ಶಿಗಳು ಹಾಗೂ ಇಲಾಖಾ ಮುಖ್ಯಸ್ಥರುಗಳಿಗೆ ಹೊಸದಾಗಿ ವಾಹನಗಳನ್ನು ಖರೀದಿಸುವಾಗ DGS & D ದರಗಳಿಗೆ ಒಳಪಟ್ಟು ಮಾರುತಿ ಎಸ್ಟಿಂ ಕಾರ್‌ನ್ನು ಖರೀದಿಸಬಹುದೆಂದು ತಿಳಿಸಿರುವ ಹಿನ್ನೆಲೆಯಲ್ಲಿ ಇಂಧನ ಇಲಾಖೆಗೆ Maruti-Esteem MPI VX (BS-III) at DGS & D Rate (without "D" Form) ನ್ನು ರೂ.4,52,843.60 ಗಳಿಗೆ ಖರೀದಿಸಲು ಉದ್ದೇಶಿಸಿ ಈ ಕೆಳಕಂಡ ಆದೇಶವನ್ನು ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 80 ಸಮನ್ವಯ 2006, ಬೆಂಗಳೂರು, ದಿನಾಂಕ:4ನೇ ಆಗಸ್ಟ್, 2006**

ಪ್ರಸ್ತಾವನೆಯಲ್ಲಿ ಹೇಳಿರುವ ಹಿನ್ನೆಲೆಯಲ್ಲಿ ಇಂಧನ ಇಲಾಖೆಯ ಪ್ರಧಾನ ಕಾರ್ಯದರ್ಶಿಯವರ ಕಛೇರಿಯ ಉಪಯೋಗಕ್ಕಾಗಿ ಒಂದು ಕಾರನ್ನು Maruti-Esteem MPI VX (BS-III) at DGS & D Rate (without "D" Form) ಕಾರನ್ನು ರೂ.4,52,843.60 (ನಾಲ್ಕು ಲಕ್ಷದ ಐವತ್ತೆರಡು ಸಾವಿರದ ಎಂಟನೂರಾನಲವತ್ತ್ಮೂರು ರೂಪಾಯಿ ಮತ್ತು ಪೈಸೆ ಅರವತ್ತು) ಗಳ ವೆಚ್ಚದಲ್ಲಿ ಮೆ: ಮಾಂಡವಿ ಮೋಟಾರ್ಸ್ ಪ್ರೈವೇಟ್ ಲಿಮಿಟೆಡ್, ಬೆಂಗಳೂರು ಇವರ ಮುಖಾಂತರ ಖರೀದಿಸಲು ಅನುಮತಿ ನೀಡಿದೆ.

ಹಾಲಿ ಇರುವ ಅಂಬಾಸಿಡರ್ ಕಾರ್ ಸಂಖ್ಯೆ: ಕೆಎ-01-ಜಿ-2264 (1996ನೇ ಮಾಡಲ್) ನ್ನು ರಾಜ್ಯ ಅತಿಥಿ ಗೃಹಕ್ಕೆ ಒಪ್ಪಿಸಲು ಸೂಚಿಸಿದೆ.

ಇದಕ್ಕಾಗಿ ತಗಲುವ ವೆಚ್ಚವನ್ನು 2006-07ನೇ ಸಾಲಿನ ಆಯವ್ಯಯದ ಲೆಕ್ಕ ಶೀರ್ಷಿಕೆ ಸಂಖ್ಯೆ: 2052 Sectt. General Services, 090 Sectt.01 KGS, 195 Transport Expenses ರಲ್ಲಿ ಭರಿಸುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣೆ ಸಂಖ್ಯೆ: ಆಇ 1217 ವೆಚ್ಚ-5/ 2006 ದಿನಾಂಕ:28.07.2006ರಲ್ಲಿ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸುರೇಶ್ ಬಿ. ಕೃಷ್ಣಪ್ಪನವರ್**
ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ.

ಪಿ.ಆರ್. 1212

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಎಂ.ಟಿ. ವಾಸುದೇವರೆಡ್ಡಿ, ಹೆಚ್‌ಸಿ-112, ದಾವಣಗೆರೆ ಜಿಲ್ಲೆ, ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿಯ ಬಗ್ಗೆ.

**ಓದಲಾಗಿದೆ:** 1. ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ದಾವಣಗೆರೆ ಜಿಲ್ಲೆ, ಇವರ ಆದೇಶ ಸಂಖ್ಯೆ: ಸಿಬ್ಬಂದಿ/5/ಸಿಆರ್-134/ 2002-03, ಓಬಿ ಸಂಖ್ಯೆ: 161/ 2003-04, ದಿನಾಂಕ:01.07.2003.

2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಪೂರ್ವ ವಲಯ, ದಾವಣಗೆರೆ ಇವರ ಆದೇಶ ಸಂಖ್ಯೆ: 25/ ಅಪೀಲು/ 2003-04, ಓಬಿ ಸಂಖ್ಯೆ: 107/ 2004-05 ದಿನಾಂಕ:10.11.2004.

3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:16.02.2005.

4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು/2/ 37/ 2005, ದಿನಾಂಕ:27.08.2005.

5. ಕರ್ನಾಟಕ ಲೋಕ ಸೇವಾ ಆಯೋಗದ ಪತ್ರ ಸಂಖ್ಯೆ: ಪಿಎಸ್‌ಸಿ 33/ ಸಿಎನ್‌ಎಸ್/ 06, ದಿನಾಂಕ:01.06.2006.

**ಪ್ರಸ್ತಾವನೆ:**

ಶ್ರೀ ಎಂ.ಟಿ. ವಾಸುದೇವರೆಡ್ಡಿ, ಸಿಹೆಚ್‌ಸಿ-112, ಹಲವಾಗಲು ಪೊಲೀಸ್ ಠಾಣೆ, ದಾವಣಗೆರೆ ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965ರ ನಿಯಮ 7ರಡಿ ದೋಷಾರೋಪಣಾ ಪತ್ರ ಹೊರಡಿಸಲಾಗಿದೆ.

**1. ದೋಷಾರೋಪಣೆ:**

"ನೀವು ದಿನಾಂಕ:07.10.2002ರಂದು ಒಂದು ಅರ್ಜಿ ಬರೆದು, ದಿನಾಂಕ:08.10.2002ರಂದು ವಾರದ ರಜೆ ಮಂಜೂರು ಮಾಡಲು ಕೋರಿ ಬರೆದಿದ್ದು, ಅದನ್ನು ನಿಮ್ಮ ಮೇಲಾಧಿಕಾರಿಗಳಿಗೆ ಕಳುಹಿಸದೆ, ಅವರಿಗೆ ಮಾಹಿತಿಯನ್ನು ತಿಳಿಸದೆ, ರಜೆಯ ಮೇಲೆ ಹೋಗಿದ್ದಲ್ಲದೆ, ದಿನಾಂಕ:05.10.2002ರಂದು ಸಹ ನಿಮ್ಮ ಮೇಲಾಧಿಕಾರಿಗಳಿಂದ ಪೂರ್ವ ಮಂಜೂರಾತಿ ಪಡೆಯದೆ, ಅವರಿಗೆ ಮಾಹಿತಿಯನ್ನು ಸಹ ತಿಳಿಸದೆ, ರಜೆ ಮೇಲೆ ಹೋಗಿರುತ್ತೀರಿ. ದಿನಾಂಕ:10.10.2002 ರಂದು ನೀವು ತೆಲಗಿ ಹೊರಠಾಣೆಯ ಠಾಣಾ ದಿನಚರಿಯಲ್ಲಿ ಗಸ್ತು ಚೆಕ್ಕಿಂಗ್‌ಗೆ ಹೋಗುವುದಾಗಿ ಸುಳ್ಳು ಷರಾ ಬರೆದು, ಅನಧಿಕೃತವಾಗಿ ಗೈರು ಹಾಜರಾಗಿ, ನಿಮ್ಮ ಅತೀವ ಅಶಿಸ್ತು ಮತ್ತು ಕರ್ತವ್ಯ ನಿರ್ಲಕ್ಷತನವನ್ನು ಪ್ರದರ್ಶಿಸಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ದೋಷಾರೋಪಣಾ ಪತ್ರವನ್ನು ಹೊರಡಿಸಿ, ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ದಾವಣಗೆರೆ, ಇವರು ಮೇಲೆ ಕ್ರಮಸಂಖ್ಯೆ: (1)ರಲ್ಲಿ ಓದಲಾದ ದಿನಾಂಕ:01.07.2003ರ ಆದೇಶದಲ್ಲಿ ಅರ್ಜೀದಾರರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಭವಿಷ್ಯದ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರದಂತೆ ಎರಡು ವರ್ಷಗಳ ಕಾಲ ಮುಂದೂಡಿದ, ಅಮಾನತ್ತಿನ ಅವಧಿ 99 ದಿನಗಳನ್ನು ಅಮಾನತ್ತೆಂದೇ ಹಾಗೂ ಗೈರು ಹಾಜರಾದ ಎರಡು ದಿನಗಳ ಅವಧಿಯನ್ನು ಸಂಬಳ ರಹಿತ ರಜೆ ಎಂದು ಪರಿಗಣಿಸಿ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಪೂರ್ವ ವಲಯ, ದಾವಣಗೆರೆ ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ:10.11.2004ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ದೋಷಾರೋಪಣಾ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಮಗಳ ಸೀಇಟಿ ಕೌನ್ಸೆಲಿಂಗ್‌ಗಾಗಿ ಎರಡು ದಿನಗಳ ರಜೆ ಬೇಕೆಂದು ಕೋರಿದ್ದರೂ, ರಜೆ ಮಂಜೂರು ಮಾಡದೆ ಶಿಕ್ಷೆ ವಿಧಿಸಿರುವುದು ಅಸಮಂಜಸವಾಗಿರುತ್ತದೆ. ಅಲ್ಲದೆ ಸುತ್ತೋಲೆ ಸಂಖ್ಯೆ: ಸಿಆಸುಇ 18 ಸೇಇವಿ 2001 ದಿನಾಂಕ:14.09.2001ರ ಉಲ್ಲಂಘನೆಯಾದಂತಾಗುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರಿಯ ದಂಡನಾ ಆದೇಶವನ್ನು ರದ್ದುಪಡಿಸಲು ಕರ್ನಾಟಕ ಲೋಕ ಸೇವಾ ಆಯೋಗದ ಅನುಮೋದನೆ ಕೋರಲಾಗಿತ್ತು. ಕರ್ನಾಟಕ ಲೋಕ ಸೇವಾ ಆಯೋಗವು ದಿನಾಂಕ:01.06.2006ರ ತನ್ನ ಪತ್ರದಲ್ಲಿ ಸರ್ಕಾರದ ಪ್ರಸ್ತಾವನೆಗೆ ಸಹಮತಿ ನೀಡಿದೆ. ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 45 ಪೊಸಿಅ 2006, ಬೆಂಗಳೂರು, ದಿನಾಂಕ:2ನೇ ಆಗಸ್ಟ್, 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ದಿನಾಂಕ:01.07.2003ರ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ದಾವಣಗೆರೆ ಜಿಲ್ಲೆ, ಇವರ ದಂಡನಾದೇಶವನ್ನು ರದ್ದುಪಡಿಸಿದೆ. ಶ್ರೀ ಎಂ.ಟಿ. ವಾಸುದೇವರೆಡ್ಡಿ, ಸಿಹೆಚ್‌ಸಿ-112, ಹಲವಾಗಲು ಪೊಲೀಸ್ ಠಾಣೆ, ದಾವಣಗೆರೆ ಇವರು ಸರ್ಕಾರಕ್ಕೆ ಸಲ್ಲಿಸಿದ್ದ ದಿನಾಂಕ:16.02.2005ರ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಪುರಸ್ಕರಿಸಿ, ಈ ಕೆಳಕಂಡಂತೆ ಆದೇಶಿಸಿದೆ.

1. ಅರ್ಜಿದಾರರ ವಾರ್ಷಿಕ ವೇತನ ಬಡ್ತಿಗಳನ್ನು ಬಿಡುಗಡೆ ಮಾಡಿ, ಸಕ್ರಮಗೊಳಿಸಿದೆ.
2. ಅಮಾನತ್ತೆಂದು ಪರಿಗಣಿಸಿರುವ ದಿನಾಂಕ:19.10.2002 ರಿಂದ 26.01.2003ರ ವರೆಗಿನ (99 ದಿನಗಳ) ಅವಧಿಯನ್ನು 'ಕರ್ತವ್ಯದ ಮೇಲೆ' ಎಂದು ಪರಿಗಣಿಸಿ ಎಲ್ಲಾ ಆರ್ಥಿಕ ಸೌಲಭ್ಯಗಳನ್ನು ಪಡೆಯತಕ್ಕದ್ದು;
3. ಗೈರು ಹಾಜರಾದ ಎರಡು ದಿನಗಳಲ್ಲಿ ಅವರ 'ಹಕ್ಕಿನಲ್ಲಿರುವ ರಜೆ' ಎಂದು ಪರಿಗಣಿಸಿದೆ.

ಈ ಆದೇಶವನ್ನು ಉಲ್ಲೇಖ (5)ರಲ್ಲಿ ಓದಲಾದ ಕರ್ನಾಟಕ ಲೋಕ ಸೇವಾ ಆಯೋಗದ ದಿನಾಂಕ:01.06.2006ರ ಪತ್ರದಲ್ಲಿ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎ. ಕುಲಕರ್ಣಿ**

ಪಿ.ಆರ್. 1213

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು).

**ವಿಷಯ:** ಶ್ರೀ ಎಸ್.ಕೆ. ಮುಳಸಾವಳಗಿ, ಡಿವೈ.ಎಸ್.ಪಿ, ಬಸವನ ಬಾಗೇವಾಡಿ ಉಪವಿಭಾಗ, ಬಿಜಾಪುರ ಜಿಲ್ಲೆ ರವರು ಸರ್ಕಾರಕ್ಕೆ ಸಲ್ಲಿಸಿರುವ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:** 1. ಶಿಸ್ತು ಪ್ರಾಧಿಕಾರಿ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ಇವರ ಆದೇಶ ಸಂಖ್ಯೆ: ಸಿಬಿ/ 5/ 33/ 2005-06, ದಿನಾಂಕ:15.12.2005.

2. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:14.01.2006.

3. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಸಿಬಿ/5/ 33/ 2005-06, ದಿನಾಂಕ:31.03.2006.

**ಪ್ರಸ್ತಾವನೆ:**

ಶ್ರೀ ಎಸ್.ಕೆ. ಮುಳಸಾವಳಗಿ, ಡಿವೈಎಸ್‌ಪಿ, ಬಸವನ ಬಾಗೇವಾಡಿ ಉಪವಿಭಾಗ, ಬಿಜಾಪುರ ಜಿಲ್ಲೆ ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965ರ ನಿಯಮ 7ರಡಿ ದೋಷಾರೋಪಣಾ ಪತ್ರ ಹೊರಡಿಸಲಾಗಿದೆ.

**1. ದೋಷಾರೋಪಣೆ:**

"ನೀವು ಪಿಐ ಆಗಿ ಹಿಂದೆ ಗಂಗಾವತಿ ನಗರ ಪೊಲೀಸ್ ಠಾಣೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ, ಗುನ್ನೆ ಸಂಖ್ಯೆ:110/2000ರ ಪ್ರಕರಣವನ್ನು ದಿನಾಂಕ:18.05.2000ರ ಸಾಯಂಕಾಲ 6.30ಕ್ಕೆ ದಾಖಲು ಮಾಡಿಕೊಂಡಿದ್ದು, ಎಫ್‌ಐಆರ್ ಅನ್ನು ದಿನಾಂಕ:19.05.2000ರ ಸಾಯಂಕಾಲ 6.00 ಗಂಟೆಗೆ ನ್ಯಾಯಾಲಯಕ್ಕೆ ಕಳುಹಿಸಿದ್ದು, ಪ್ರಕರಣದ ತನಿಖೆಯ ಕಾಲದಲ್ಲಿ ಜಪ್ತಿ ಮಾಡಿದ ಗಂಧದ ತುಂಡುಗಳಿಗೆ ಶ್ರೀಗಂಧದ ತುಂಡುಗಳು ಎಂದು ಅರಣ್ಯ ಇಲಾಖೆಯ ಅಧಿಕಾರಿಗಳಿಂದ ದೃಢೀಕರಣ ಪತ್ರ ಪಡೆದಿರುವುದಿಲ್ಲ. ಹಾಗೂ ಮೂರು ಜನ ಆರೋಪಿತರ ಪೈಕಿ ಎರಡನೇ ಆರೋಪಿಯನ್ನು ಪರಾರಿಯಾಗಿದ್ದಾನೆ ಎಂದು ದೋಷಾರೋಪಣಾ ಪತ್ರದಲ್ಲಿ ನಮೂದಿಸಿ, ಅವನನ್ನು ನ್ಯಾಯಾಲಯಕ್ಕೆ ಹಾಜರು ಪಡಿಸುವಲ್ಲಿ ವಿಫಲರಾಗಿ, ನಿಮ್ಮ ಕರ್ತವ್ಯದಲ್ಲಿ ಅತೀವ ನಿರ್ಲಕ್ಷತನ ಮತ್ತು ಬೇಜವಾಬ್ದಾರಿತನ ತೋರಿಸಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ಇವರು ಮೇಲೆ ಕ್ರಮಸಂಖ್ಯೆ: (1)ರಲ್ಲಿ ಓದಲಾದ ದಿನಾಂಕ:15.12.2005ರ ಆದೇಶದಲ್ಲಿ ಅರ್ಜಿದಾರರ ಮುಂದಿನ ಒಂದು ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗೆ ಧಕ್ಕೆ ಆಗದಂತೆ ಆರು ತಿಂಗಳ ಕಾಲ ಮುಂದೂಡಿದ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರು ಒಬ್ಬ ಜವಾಬ್ದಾರಿಯುತ ಪೊಲೀಸ್ ಅಧಿಕಾರಿಯಾಗಿದ್ದು, ದೋಷಾರೋಪಗಳಿಗೆ ಸಲ್ಲಿಸುವ ಸಮಜಾಯಿಷಿಯಲ್ಲಿ ಪರಿಗಣಿಸುವಂತಹ ಯಾವುದೇ ಹೊಸ ಅಂಶಗಳಿರುವುದಿಲ್ಲ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ಲಘು ದಂಡನಾ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡುಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 231 ಪೊಸಿಅ 2006, ಬೆಂಗಳೂರು, ದಿನಾಂಕ:5ನೇ ಆಗಸ್ಟ್, 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎಸ್.ಕೆ. ಮುಳಸಾವಳಗಿ, ಡಿವೈ.ಎಸ್.ಪಿ., ಬಸವನ ಬಾಗೇವಾಡಿ, ಬಿಜಾಪುರ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ದಿನಾಂಕ:14.01.2006ರ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎ. ಕುಲಕರ್ಣಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು).

ಪಿ.ಆರ್. 1214

**ವಿಷಯ:** ಶ್ರೀ ಎಂ.ಬಿ. ಗೋಳಸಂಗಿ, ಪಿಎಸ್‌ಐ ವಾರೆಂಟ್ ಜಾರಿಗೊಳಿಸದ ಕಾರಣ ಇವರ ವಾರ್ಷಿಕ ವೇತನ 6 ತಿಂಗಳ ಅವಧಿಗೆ ಮುಂದೂಡಿದ ಬಗ್ಗೆ ಪರಿಷ್ಕರಣ ಮೇಲ್ಮನವಿ ಅರ್ಜಿ.

**ಓದಲಾಗಿದೆ:**
1. ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ದಾವಣಗೆರೆ ಜಿಲ್ಲೆ,ಇವರ ಆದೇಶ ಸಂಖ್ಯೆ: ಸಿಬ್ಬಂದಿ/5/ಇವಿ-2/ 82/ 2005, ಓವಿ ಸಂಖ್ಯೆ:190/ 2005-06, ದಿನಾಂಕ:14.07.2005.
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಐಜಿಪಿ, ಪೂರ್ವ ವಲಯ, ದಾವಣಗೆರೆ, ಇವರ ಆದೇಶ ಸಂಖ್ಯೆ: 31/ ಅಪೀಲು/ ಸಿಬ್ಬಂದಿ-2/ 2005-06, ಓಬಿ ಸಂಖ್ಯೆ:167/ 2005-06, ದಿನಾಂಕ:08/15.11.2005.
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:26.01.2006.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು/ 2/ 22/ 2006, ದಿನಾಂಕ:19.04.2006.

**ಪ್ರಸ್ತಾವನೆ:**

ಶ್ರೀ ಎಂ.ವಿ. ಗೋಳಸಂಗಿ, ಪಿಎಸ್‌ಐ, ಹಲುವಾಗಲು ಪೊಲೀಸ್ ಠಾಣೆ, ಹರಪನಹಳ್ಳಿ ತಾಲ್ಲೂಕು, ದಾವಣಗೆರೆ ಜಿಲ್ಲೆ, ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965ರ ನಿಯಮ 7ರಡಿ ದೋಷಾರೋಪಣಾ ಪತ್ರ ಹೊರಡಿಸಲಾಗಿದೆ.

**ದೋಷಾರೋಪಣೆ:**

"ನೀವು ದಾವಣಗೆರೆ ಗ್ರಾಮಾಂತರ ಪೊಲೀಸ್ ಠಾಣೆಯ (ಕಾಸು) ವಿಭಾಗದ ಪಿಎಸ್‌ಐ ಆಗಿದ್ದು, ಠಾಣೆಯ ಗುನ್ನೆ ಸಂಖ್ಯೆ: 83/ 2003, ಕಲಂ 279, 304(ಎ) ಐಪಿಸಿ ಪ್ರಕರಣವು ನ್ಯಾಯಾಲಯದಲ್ಲಿ ಸಿಸಿ ನಂ.1547/2003ರಲ್ಲಿ ವಿಚಾರಣೆಯಲ್ಲಿದ್ದು, ಸದರಿ ಪ್ರಕರಣದಲ್ಲಿ ತಮಿಳುನಾಡಿನ ಸಾಕ್ಷಿದಾರರಾದ 1,4,5,11,12,13 ರವರಿಗೆ ದಿನಾಂಕ:01.06.2004 ಮತ್ತು 08.06.2004 ರಂದು ನ್ಯಾಯಾಲಯಕ್ಕೆ ಹಾಜರಾಗಿ ಸಾಕ್ಷಿ ನುಡಿಯಲು ವಾರೆಂಟನ್ನು ನೀಡಿದ್ದರೂ ಸಹ ನೀವು ಸದರಿ ಸಾಕ್ಷಿಗಳಿಗೆ ವಾರೆಂಟನ್ನು ಜಾರಿಗೊಳಿಸಲು ಸಿಬ್ಬಂದಿಯನ್ನು ನೇಮಕ ಮಾಡಿರುವುದಿಲ್ಲ. ಇದರಿಂದಾಗಿ ಸದರಿ ಸಾಕ್ಷಿಗಳು ನ್ಯಾಯಾಲಯಕ್ಕೆ ಹಾಜರಾಗಿ ಸಾಕ್ಷಿ ನುಡಿಯದೇ ಇದ್ದುದರಿಂದ ನ್ಯಾಯಾಲಯವು ಸದರಿ ಪ್ರಕರಣದಲ್ಲಿನ ಆರೋಪಿಯನ್ನು ಬಿಡುಗಡೆ ಮಾಡಿರುತ್ತದೆ. ತನಿಖಾಧಿಕಾರಿಯಾದ ನೀವು ಸಾಕ್ಷಿದಾರರಿಗೆ ವಾರೆಂಟನ್ನು ಜಾರಿಗೊಳಿಸಲು ಸಿಬ್ಬಂದಿಯನ್ನು ತಮಿಳುನಾಡಿಗೆ ನೇಮಕ ಮಾಡದೆ ಕರ್ತವ್ಯದಲ್ಲಿ ಅತೀವ ನಿರ್ಲಕ್ಷ್ಯತನ ಪ್ರದರ್ಶಿಸಿದ್ದೀರಿ."

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ದಾವಣಗೆರೆ ಜಿಲ್ಲೆ, ಇವರು ಮೇಲೆ ಕ್ರಮಸಂಖ್ಯೆ: (1)ರಲ್ಲಿ ಓದಲಾದ ದಿನಾಂಕ:14.07.2005ರ ಆದೇಶದಲ್ಲಿ ಅರ್ಜಿದಾರರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರದಂತೆ ಆರು ತಿಂಗಳ ಕಾಲ ಮುಂದೂಡಿದ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಪೂರ್ವ ವಲಯ, ದಾವಣಗೆರೆ ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ:08/15.11.2005ರ ಆದೇಶದಲ್ಲಿ ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ ವಿಚಾರಣೆ ದಾಖಲೆಗಳನ್ನೂ ಪರಿಶೀಲಿಸಲಾಗಿದೆ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತನ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಸಾಕ್ಷಿದಾರರನ್ನು ನ್ಯಾಯಾಲಯಕ್ಕೆ ಹಾಜರುಪಡಿಸದೇ ಆರೋಪಿತರು ಬಿಡುಗಡೆ ಹೊಂದಲು ಕಾರಣರಾದ ಇವರ ಸಮಜಾಯಿಷಿಯಲ್ಲಿ ಪರಿಗಣಿಸುವಂತಹ ಯಾವುದೇ ಹೊಸ ಅಂಶಗಳಿರುವುದಿಲ್ಲ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ಲಘು ದಂಡನಾ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 270 ಪೊಸಿಅ 2006, ಬೆಂಗಳೂರು, ದಿನಾಂಕ:8ನೇ ಆಗಸ್ಟ್, 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎಂ.ಬಿ.ಗೋಳಸಂಗಿ, ಪಿಎಸ್ಐ (ಕಾನೂನು ಮತ್ತು ಸುವ್ಯವಸ್ಥೆ) ದಾವಣಗೆರೆ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ದಿನಾಂಕ:26.01.2006ರ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಆರ್.ಎ. ಕುಲಕರ್ಣಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು).

ಪಿ.ಆರ್. 1215

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ:** ಮೈಸೂರು ಸಕ್ಕರೆ ಕಾರ್ಖಾನೆ (ನಿ) ಇದರ ಪುನರುಜ್ಜೀವನಕ್ಕೆ ಸರ್ಕಾರದಿಂದ ಆರ್ಥಿಕ ನೆರವು- ದುಡಿಯುವ ಬಂಡವಾಳ ಬಿಡುಗಡೆ ಬಗ್ಗೆ ಆಡಳಿತಾತ್ಮಕ ಆದೇಶ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ: ಸಿಐ 202 ಎಸ್‌ಜಿಎಫ್ 04 ದಿನಾಂಕ:06.05.2005.
2. ಸರ್ಕಾರದ ಆದೇಶ ಸಂಖ್ಯೆ: ಸಿಐ 153 ಎಸ್‌ಜಿಎಫ್ 05 ದಿನಾಂಕ:24.08.2005.
3. ಸರ್ಕಾರದ ಆದೇಶ ಸಂಖ್ಯೆ: ಸಿಐ 34 ಎಸ್‌ಜಿಎಫ್ 05 ದಿನಾಂಕ:06.10.2005.
4. ಸರ್ಕಾರದ ಆದೇಶ ಸಂಖ್ಯೆ: ಸಿಐ 34 ಎಸ್‌ಜಿಎಫ್ 05 ದಿನಾಂಕ:25.11.2005.
5. ವ್ಯವಸ್ಥಾಪಕ ನಿರ್ದೇಶಕರು ಮೈಸೂರು ಸಕ್ಕರೆ ಕಾರ್ಖಾನೆ ರವರ ಪತ್ರ ಸಂಖ್ಯೆ: ಎಂಎಸ್‌ಸಿಓ/05/ ಎಂಡಿ/ (ಬಿಐಎಫ್‌ಆರ್)/ 338 ದಿನಾಂಕ:19.12.2005.

**ಪ್ರಸ್ತಾವನೆ:**

ಮೇಲೆ ಓದಲಾದ 1 ರಿಂದ 4 ರಲ್ಲಿರುವ ಸರ್ಕಾರದ ಆದೇಶಗಳಲ್ಲಿ ಮೈಸೂರು ಸಕ್ಕರೆ ಕಾಖಾನೆ (ನಿ) ಮಂಡ್ಯ, ಈ ಕಾರ್ಖಾನೆಗೆ 2005-06ನೇ ಸಾಲಿಗೆ ತನ್ನ ಕಬ್ಬು ಅರೆಯುವ ಚಟುವಟಿಕೆಗಾಗಿ 25,52.27.000/- ರೂ.ಗಳ ದುಡಿಯುವ ಬಂಡವಾಳವನ್ನು ಸಾಲವಾಗಿ ಸರ್ಕಾರವು ಬಿಡುಗಡೆ ಮಾಡಿದೆ.

ಮೇಲೆ ಓದಲಾದ (5)ರಲ್ಲಿರುವ ವ್ಯವಸ್ಥಾಪಕ ನಿರ್ದೇಶಕರು ಮೈಸೂರು ಸಕ್ಕರೆ ಕಾರ್ಖಾನೆ ರವರ ಪತ್ರದಲ್ಲಿ ಕಾರ್ಖಾನೆಯನ್ನು ಪುನಃಶ್ಚೇತನಗೊಳಿಸುವ ಸಲುವಾಗಿ 2006-07ನೇ ಸಾಲಿಗೆ ಕಾರ್ಖಾನೆಯ ಕಬ್ಬು ಅರೆಯುವ ಕಾರ್ಯಕ್ಕಾಗಿ 36.30 ಕೋಟಿ ರೂ.ಗಳನ್ನು ದುಡಿಯುವ ಬಂಡವಾಳವಾಗಿ ಮಂಜೂರು ಮಾಡಬೇಕೆಂದು ಸರ್ಕಾರವನ್ನು ಕೋರಿರುತ್ತಾರೆ.

ವಿಷಯವನ್ನು ಕೂಲಂಕುಷವಾಗಿ ಪರಿಶೀಲಿಸಿ 2006-07ನೇ ಸಾಲಿನ ಕಬ್ಬು ಅರೆಯುವ ಕಾರ್ಯಕ್ರಮಗಳಿಗಾಗಿ 5.00 ಕೋಟಿ ರೂ.ಗಳ ದುಡಿಯುವ ಬಂಡವಾಳವನ್ನು ಸಾಲವಾಗಿ ಬಿಡುಗಡೆಗೊಳಿಸಲು ಈ ಕೆಳಕಂಡಂತೆ ಆಡಳಿತಾತ್ಮಕ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಐ 34 ಎಸ್‌ಜಿಎಫ್ 2005, ಬೆಂಗಳೂರು, ದಿನಾಂಕ:3ನೇ ಆಗಸ್ಟ್, 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಮೈಸೂರು ಸಕ್ಕರೆ ಕಾರ್ಖಾನೆ (ನಿ), ಮಂಡ್ಯ ಈ ಕಾರ್ಖಾನೆಗೆ 2006-07ನೇ ಸಾಲಿನ ಕಬ್ಬು ಅರೆಯುವ ಕಾರ್ಯಕ್ರಮಗಳನ್ನು ಪ್ರಾರಂಭಿಸುವ ಸಲುವಾಗಿ ದುಡಿಯುವ ಬಂಡವಾಳವಾಗಿ 5.00 ಕೋಟಿ ರೂ.ಗಳನ್ನು (ರೂ.ಐದು ಕೋಟಿ ರೂ.ಗಳು ಮಾತ್ರ) ಸಾಲವಾಗಿ ಬಿಡುಗಡೆ ಮಾಡಲು ಸರ್ಕಾರದ ಮಂಜೂರಾತಿಯನ್ನು ನೀಡಲಾಗಿದೆ.

2006-07ನೇ ಸಾಲಿನ ಅನುದಾನದಲ್ಲಿ ಇದಕ್ಕಾಗಿ ಯಾವುದೇ ಹಣವನ್ನು ಒದಗಿಸಿರುವುದಿಲ್ಲ. ಆದುದರಿಂದ ಮೊದಲಿಗೆ ಈ ಹಣವನ್ನು ಸಾದಿಲ್ವಾರು ನಿಧಿ ಲೆಕ್ಕ ಶೀರ್ಷಿಕೆ "8000-00-673-0-00 ಕೈಗಾರಿಕೆಗಳು" ಇದರಡಿ ಲೆಕ್ಕ ಶೀರ್ಷಿಕೆ 6860-04-190-2-01-395(ಪಿ) ಸಾರ್ವಜನಿಕ ಉದ್ದಿಮೆಗಳಿಗೆ ಮತ್ತು ಸ್ಥಳೀಯ ಸಂಸ್ಥೆಗಳಿಗೆ ಸಾಲಗಳು ಇದರಿಂದ ಬಿಡುಗಡೆಗೆ ಮಂಜೂರು ಮಾಡಲಾಗಿದೆ.

ಸಾದಿಲ್ವಾರು ನಿಧಿಯಿಂದ ಈ ಹಣವನ್ನು ಬಿಡುಗಡೆಗೊಳಿಸಲು ಆರ್ಥಿಕ ಇಲಾಖೆಯು ಪ್ರತ್ಯೇಕ ಆದೇಶವನ್ನು ಹೊರಡಿಸಲಿದೆ. ಆ ನಂತರವೇ ಹಣ ಬಿಡುಗಡೆಗೆ ಕ್ರಮವಹಿಸಬೇಕು. ಹಣ ಸೆಳೆಯುವ ಅಧಿಕಾರಿಯವರು ಸಾದಿಲ್ವಾರು ನಿಧಿಯಿಂದ ಹಣ ಸೆಳೆಯಲು ಬಿಲ್ಲನ್ನು ಆರ್ಥಿಕ ಇಲಾಖೆಯಿಂದ ಹೊರಡಿಸುವ ಪ್ರತ್ಯೇಕ ಆದೇಶವನ್ನು ಈ ಆದೇಶದೊಂದಿಗೆ ಲಗತ್ತಿಸಿ, ಖಜಾನೆಗೆ ಸಲ್ಲಿಸಿದ ನಂತರ ಹಣ ಬಿಡುಗಡೆಗೆ ಖಜಾನೆ ಕ್ರಮವಹಿಸುವುದು.

ಹಣ ಸೆಳೆಯುವ ಅಧಿಕಾರಿಯು ಸಹಾಯಕ ನಿರ್ದೇಶಕರು (ಹೆಚ್.ಆರ್.ಡಿ. ಆಡಳಿತ ಮತ್ತು ಇಎಂ) ಜಿಲ್ಲಾ ಕೈಗಾರಿಕಾ ಕೇಂದ್ರ ಮಂಡ್ಯ ಆಗಿದ್ದು ಸದರಿಯವರು ಹಣ ಸೆಳೆಯುವ ಬಿಲ್ಲನ್ನು ಆಯುಕ್ತರು, ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು, ಬೆಂಗಳೂರು ಇವರ ಮೇಲು ಸಹಿಯೊಂದಿಗೆ ಖಜಾನೆಗೆ ಸಲ್ಲಿಸಬೇಕು.

ಸದರಿ ಸಾಲದ ಹಣದ ಮರುಪಾವತಿ ಹಾಗೂ ಇನ್ನಿತರೇ ಅಂಶಗಳು, ಷರತ್ತು ಹಾಗೂ ನಿಬಂಧನೆಗಳ ಬಗ್ಗೆ ಪ್ರತ್ಯೇಕ ಆದೇಶವನ್ನು ನಂತರ ಹೊರಡಿಸಲಾಗುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1537 (ಎ) ವೆಚ್ಚ-1/ 05 ದಿನಾಂಕ:28.07.2006ರಲ್ಲಿ ನೀಡಲಾದ ಸಹಮತಿಯಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
ಪೀಠಾಧಿಕಾರಿ (ಸಕ್ಕರೆ),
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

ಪಿ.ಆರ್. 1216

**ವಿಷಯ:** ಶ್ರೀ ಕೆ. ತಿಮ್ಮಪ್ಪ, ಉಪನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಇವರ ಅಮಾನತ್ತನ್ನು ತೆರವುಗೊಳಿಸುವ ಕುರಿತು.

**ಓದಲಾಗಿದೆ:** 1. ಅಧಿಕೃತ ಜ್ಞಾಪನಾ ಸಂಖ್ಯೆ: ಡಿಪಿಎಆರ್:13:ಎಸ್‌ಡಿಇ.85 ದಿನಾಂಕ:03.07.1985.

2. ಸರ್ಕಾರಿ ಆದೇಶ ಸಂಖ್ಯೆ: ಸಿಐ.92:ಎಂಜಿಎಸ್.2005, ದಿನಾಂಕ:09.11.2005.

3. ಅಪರ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರ ಸಂಖ್ಯೆ: ಲೋಕ್:ಐಎನ್‌ವಿ (ಜಿ): ಎಂ.16:ಸಿ.ಆರ್.6: 2005: ಮೈಸೂರು ದಿನಾಂಕ:27.05.2006.

**ಪ್ರಸ್ತಾವನೆ:**

ಲೋಕಾಯುಕ್ತ ಪೊಲೀಸರ ಟ್ರ್ಯಾಪ್ ಪ್ರಕರಣದಲ್ಲಿ ಸಿಕ್ಕಿಬಿದ್ದ ಕಾರಣ, ಶ್ರೀ ಕೆ. ತಿಮ್ಮಪ್ಪ, ಉಪನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ ಇವರನ್ನು ಮೇಲೆ ಕ್ರಮಸಂಖ್ಯೆ:(2)ರಲ್ಲಿ ಓದಲಾದ ಆದೇಶದಲ್ಲಿ ಅಮಾನತುಗೊಳಿಸಲಾಗಿತ್ತು. ಈಗಾಗಲೇ ಅಮಾನತುಗೊಳಿಸಿ 8 ತಿಂಗಳು ಕಳೆದರೂ ಪ್ರಕರಣದ ತನಿಖೆಯು ಇದುವರೆವಿಗೂ ಮುಗಿದಿರುವುದಿಲ್ಲ. ಕ್ರಮಸಂಖ್ಯೆ: (3)ರ ಪತ್ರದಲ್ಲಿ ಪ್ರಕರಣವು ತನಿಖೆಯ ಹಂತದಲ್ಲಿದೆ ಎಂದು ಲೋಕಾಯುಕ್ತ ಪೊಲೀಸರು ತಿಳಿಸಿರುತ್ತಾರೆ. ಸದರಿ ತನಿಖೆಯು 6 ತಿಂಗಳ ಒಳಗಾಗಿ ಮುಕ್ತಾಯವಾಗದಿದ್ದ ಸಂದರ್ಭದಲ್ಲಿ ಅಮಾನತ್ತುಗೊಂಡ ಸರ್ಕಾರಿ ನೌಕರರ ವಿರುದ್ಧ ಇಲಾಖಾ ವಿಚಾರಣೆಯನ್ನು ಕಾಯ್ದಿರಿಸಿ, ಕರ್ತವ್ಯಕ್ಕೆ ನೇಮಕ ಮಾಡಿಕೊಳ್ಳಲು ಕ್ರಮಸಂಖ್ಯೆ: (1)ರಲ್ಲಿ ಓದಲಾದ ಅಧಿಕೃತ ಜ್ಞಾಪನಾದಲ್ಲಿ ಅವಕಾಶ ಕಲ್ಪಿಸಲಾಗಿದೆ.

ಆದ್ದರಿಂದ, ಶ್ರೀ ಕೆ. ತಿಮ್ಮಪ್ಪ, ಉಪನಿರ್ದೇಶಕರು, ಇವರ ಅಮಾನತ್ತನ್ನು ತೆರವುಗೊಳಿಸಿ, ಅವರನ್ನು ಸೇವೆಯಲ್ಲಿ ಪುನರ್‌ಸ್ಥಾಪಿಸಲು ತೀರ್ಮಾನಿಸಿ ಕೆಳಕಂಡ ಆದೇಶ ನೀಡಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಐ.92: ಎಂಜಿಎಸ್.2005, ಬೆಂಗಳೂರು, ದಿನಾಂಕ:3ನೇ ಆಗಸ್ಟ್, 2006**

ಪ್ರಸ್ತಾವನೆಯಲ್ಲಿ ವಿವರಿಸಿದಂತೆ, ಶ್ರೀ ಕೆ. ತಿಮ್ಮಪ್ಪ, ಉಪನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ ಇವರ ಅಮಾನತ್ತನ್ನು ತಕ್ಷಣದಿಂದ ಜಾರಿಗೆ ಬರುವಂತೆ ತೆರವುಗೊಳಿಸಿ, ಇವರ ವಿರುದ್ಧದ ಇಲಾಖಾ ವಿಚಾರಣೆ: ಕ್ರಿಮಿನಲ್ ಮೊಕದ್ದಮೆಯನ್ನು ಕಾಯ್ದಿರಿಸಿ, ಅವರನ್ನು ಸೇವೆಯಲ್ಲಿ ಪುನರ್ ಸ್ಥಾಪಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್.ವಿ. ರಾಮಚಂದ್ರರಾವ್**

ಪಿ.ಆರ್. 1217

ಸರ್ಕಾರದ ಅಧೀನ ಕಾರ್ಯದರ್ಶಿ (ಗಣಿ), (ಪ್ರ),

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

## ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ

**ವಿಷಯ:** ಚಿತ್ರದುರ್ಗ ಹಾಗೂ ದಾವಣಗೆರೆ (ಪರಿಷ್ಕೃತ) ಜಿಲ್ಲಾ ಗ್ಯಾಸೆಟಿಯರ್ ಸಂಪುಟಗಳ ಅಧ್ಯಾಯಗಳನ್ನು ಹೊರಗಿನ ವಿದ್ವಾಂಸರಿಂದ ರಚಿಸುವ ಕಾರ್ಯಕ್ಕೆ ಹಣಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** ಮುಖ್ಯ ಸಂಪಾದಕರು, ಗ್ಯಾಸೆಟಿಯರ್ ಇಲಾಖೆ ಅವರ ಪತ್ರಸಂಖ್ಯೆ: ಕಗ್ಯಾಇ:ಸಿ(2):ಚಿ.ದ.ಜಿ.ಗ್ಯಾ:2006-07, ದಿನಾಂಕ:10.05.2006.

**ಪ್ರಸ್ತಾವನೆ:**

ಮುಖ್ಯಸಂಪಾದಕರು, ಕರ್ನಾಟಕ ಗ್ಯಾಸೆಟಿಯರ್ ಇಲಾಖೆ ಅವರು ಮೇಲೆ ಓದಲಾದ ದಿನಾಂಕ:10.05.2006ರ ಪತ್ರದಲ್ಲಿ ಚಿತ್ರದುರ್ಗ ಹಾಗೂ ದಾವಣಗೆರೆ ಜಿಲ್ಲಾ ಗ್ಯಾಸೆಟಿಯರ್ ಸಂಪುಟದ ಅಧ್ಯಾಯಗಳನ್ನು ರಚಿಸುವ ಯೋಜನೆಗಾಗಿ ಪ್ರತಿ ಅಧ್ಯಾಯಕ್ಕೆ 20 ಸಾವಿರ ರೂಪಾಯಿಗಳಂತೆ ಒಟ್ಟು ಎಂಟು ಅಧ್ಯಾಯಗಳಿಗೆ ಹೊರಗಿನ ವಿದ್ವಾಂಸರಿಗೆ ಪಾವತಿ ಮಾಡುವ ಸಲುವಾಗಿ ಒಟ್ಟು 1,60,000/- ರೂಪಾಯಿಗಳನ್ನು ಬಿಡುಗಡೆ ಮಾಡಲು ಕೋರಿದ್ದಾರೆ. ಇದನ್ನು ಪರಿಶೀಲಿಸಿದ ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಸಂಕಇ 10 ಕರಾಗೆ 2006, ಬೆಂಗಳೂರು, ದಿನಾಂಕ:5ನೇ ಆಗಸ್ಟ್, 2006**

ಚಿತ್ರದುರ್ಗ ಮತ್ತು ದಾವಣಗೆರೆ ಜಿಲ್ಲಾ ಗ್ಯಾಸೆಟಿಯರ್‌ಗಳ ಎಂಟು ಅಧ್ಯಾಯಗಳನ್ನು ರಚಿಸುವ ಸಲುವಾಗಿ ಹೊರಗಿನ ವಿದ್ವಾಂಸರಿಗೆ ಪ್ರತಿ ಅಧ್ಯಾಯಕ್ಕೆ 20,000/- ರೂಪಾಯಿಯಂತೆ ಪಾವತಿಸಲು ರೂ.1,60,000/-ಗಳನ್ನು ಈ ಮೂಲಕ ಮುಖ್ಯಸಂಪಾದಕರು, ಕರ್ನಾಟಕ ಗ್ಯಾಸೆಟಿಯರ್ ಇಲಾಖೆ ಅವರಿಗೆ ಅನುಮತಿ ನೀಡಲಾಗಿದೆ.

ಈ ಸಂಬಂಧದ ವೆಚ್ಚವನ್ನು 2006-07ನೇ ಸಾಲಿನ ಆಯವ್ಯಯ ಲೆಕ್ಕಶೀರ್ಷಿಕೆ 3454-02-110-0-01 (ಯೋಜನೆ) ಉಪಶೀರ್ಷಿಕೆ 059 ಅಡಿಯಲ್ಲಿ ಇಲಾಖೆಗೆ ಒದಗಿಸಿರುವ 10.00 ಲಕ್ಷ ರೂಪಾಯಿಗಳ ಅನುದಾನವನ್ನು ಭರಿಸತಕ್ಕದ್ದು.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಅವರ ಟಿಪ್ಪಣಿ ಸಂಖ್ಯೆ: ಶಿಇ 454 ಐಎಫ್(ಬಿಎ) 2006 ದಿನಾಂಕ:26.06.2006ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹಾಗೂ ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96 ದಿನಾಂಕ:10.07.1996ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ಪ್ರದತ್ತವಾದ ಅಧಿಕಾರದ ಪ್ರತ್ಯಾಯೋಜನೆಯನ್ವಯ ಮತ್ತು ಆದೇಶ ಸಂಖ್ಯೆ: ಎಫ್‌ಡಿ 3 ಬಿಪಿಇ 2006 ದಿನಾಂಕ:31.03.2006 ರಲ್ಲಿ ನಿಗದಿಪಡಿಸಿರುವ ಮಾರ್ಗಸೂಚಿಗಳನ್ನು ಪಾಲಿಸುವ ಷರತ್ತಿಗೆ ಒಳಪಟ್ಟು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್. ಶಿವರಾಮ್**

ಪಿ.ಆರ್. 1218

ಸರ್ಕಾರದ ಅಧೀನ ಕಾರ್ಯದರ್ಶಿ,

ಕನ್ನಡ ಮತ್ತು ಸಂಸ್ಕೃತಿ, ವಾರ್ತಾ

ಮತ್ತು ಪ್ರವಾಸೋದ್ಯಮ ಇಲಾಖೆ (ಆಡಳಿತ ಕನ್ನಡ)

**ವಿಷಯ:** ಕರ್ನಾಟಕ ರಾಜ್ಯ ಪತ್ರಾಗಾರ ಇಲಾಖೆಯಲ್ಲಿರುವ ಆಯ್ದ ಐತಿಹಾಸಿಕ ದಾಖಲೆಗಳನ್ನು ಖಾಸಗಿ ಸಹಭಾಗಿತ್ವದಲ್ಲಿ ಸ್ಕ್ಯಾನ್ ಮಾಡಲು ರೂ.4.00 ಲಕ್ಷ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ: ಸಂಕಇ 60 ಸ್ವೀಮರ 2006 ದಿನಾಂಕ:07.04.2006.

2. ಕನಾಟಕ ರಾಜ್ಯ ಪತ್ರಾಗಾರ ನಿರ್ದೇಶಕರ ಪತ್ರ ಸಂಖ್ಯೆ: ಎ.ಆರ್.ಎಸ್.1 ಹೆಚ್.ಆರ್.ಎಸ್. 2006-07 ದಿನಾಂಕ:06.05.2006.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ದಿನಾಂಕ:07.04.2006ರ ಸರ್ಕಾರ ಆದೇಶದಲ್ಲಿ (ಅನುಬಂಧ-ಈ) ಕರ್ನಾಟಕ ರಾಜ್ಯ ಪತ್ರಾಗಾರ ಇಲಾಖೆಗೆ ಆಯ್ದ ಐತಿಹಾಸಿಕ ದಾಖಲೆಗಳನ್ನು ಖಾಸಗಿ ಸಹಭಾಗಿತ್ವದಲ್ಲಿ ಸ್ಕ್ಯಾನ್ ಮಾಡಿಸಲು ರೂ.4.00 ಲಕ್ಷಗಳನ್ನು 2006-07ನೇ ಸಾಲಿಗೆ ನಿಗದಿಪಡಿಸಿದೆ. ನಿರ್ದೇಶಕರು, ಕರ್ನಾಟಕ ರಾಜ್ಯ ಪತ್ರಾಗಾರ ಇಲಾಖೆ ಬೆಂಗಳೂರು ರವರು ಮೇಲೆ ಓದಲಾದ ದಿನಾಂಕ:06.06.2006ರ ಪತ್ರದಲ್ಲಿ ಐತಿಹಾಸಿಕ ದಾಖಲೆಗಳನ್ನು ಸಂಶೋಧಕರಿಗೆ, ಸರ್ಕಾರದ ಕಛೇರಿಯವರಿಗೆ ಹಾಗೂ ಮುಂದಿನ ಪೀಳಿಗೆಯವರಿಗೆ ಪರಾಮರ್ಶಿಸಲು ಅವುಗಳನ್ನು ವೈಜ್ಞಾನಿಕವಾಗಿ ಸಂರಕ್ಷಣೆ ಮಾಡಲಾಗುತ್ತಿದೆ. ಈ ಇಲಾಖೆಯಲ್ಲಿ ಸಚಿವಾಲಯದ ವಿವಿಧ ಇಲಾಖೆಗಳಿಗೆ ಸಂಬಂಧಿಸಿದ ದಾಖಲೆಗಳಿದ್ದು, ಇವುಗಳಲ್ಲಿ 1821 ರಿಂದ 1958 ರವರೆಗೆ ಇರುತ್ತದೆ. ಇವುಗಳಲ್ಲದೆ ಹಳೆಯ ಫೋರ್ಟ್ ಸೆಂಟ್ ಜಾರ್ಜ್ ರಾಜ್ಯ ಪತ್ರಗಳು ಹಾಗೂ ಮೈಸೂರು ರಾಜ್ಯ ಪತ್ರಗಳು 1866 ರಿಂದ ಇಲ್ಲಿಯವರೆಗೆ ಇದ್ದು, ಇವುಗಳನ್ನು ನಾಶವಾಗದಂತೆ ತಡೆಗಟ್ಟಲು ಸ್ಕ್ಯಾನ್ ಮಾಡಿಸುವುದು ಅಗತ್ಯವಾಗಿರುತ್ತದೆ. ಈ ಕಾರ್ಯಕ್ಕಾಗಿ 4.00 ಲಕ್ಷ ರೂ.ಗಳನ್ನು ಬಿಡುಗಡೆ ಮಾಡಲು ಕೋರಿದ್ದಾರೆ. ಇದನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಂಕಇ 9 ರಾಪಸ 2006, ಬೆಂಗಳೂರು, ದಿನಾಂಕ:7ನೇ ಆಗಸ್ಟ್, 2006**

2006-07ನೇ ಸಾಲಿನಲ್ಲಿ ರಾಜ್ಯ ಪತ್ರಾಗಾರ ಇಲಾಖೆಯಲ್ಲಿರುವ ಆಯ್ದ ಐತಿಹಾಸಿಕ ದಾಖಲೆಗಳನ್ನು ಖಾಸಗಿ ಸಹಭಾಗಿತ್ವದಲ್ಲಿ ಸ್ಕ್ಯಾನ್ ಮಾಡಲು ರೂ.4.00 ಲಕ್ಷ (ನಾಲ್ಕು ಲಕ್ಷ ರೂಪಾಯಿಗಳು ಮಾತ್ರ) ವನ್ನು ನಿರ್ದೇಶಕರು, ರಾಜ್ಯ ಪತ್ರಾಗಾರ ಇಲಾಖೆ, ಬೆಂಗಳೂರು ಇವರಿಗೆ ಸಾರ್ವಜನಿಕ ಸಂಗ್ರಹಣೆಯಲ್ಲಿ ಪಾರದರ್ಶಕತೆ ಅಧಿನಿಯಮ 1999 ನಿಯಮ 2000 ಅನುಸರಿಸುವ ಷರತ್ತಿಗೊಳಪಟ್ಟು ಬಿಡುಗಡೆ ಮಾಡಲಾಗಿದೆ. ಈ ವೆಚ್ಚವನ್ನು ಲೆಕ್ಕಶೀರ್ಷಿಕೆ 2205-00-104-0-01 (ಯೋಜನೇತರ) ಉಪಶೀರ್ಷಿಕೆ 051 ಸಾಮಾನ್ಯ ವೆಚ್ಚ ಅಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಆಂತರೀಕ ಆರ್ಥಿಕ ಸಲಹೆಗಾರರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಅವರ ಟಿಪ್ಪಣಿ ಸಂಖ್ಯೆ: ಇಡಿ 514 ಐಎಫ್ (ಬಿ.ಎ.) 2006 ದಿನಾಂಕ:27.06.2006ರಲ್ಲಿ ನೀಡಿದ ಸಹಮತಿಯನ್ವಯ ಹಾಗೂ ಸರ್ಕಾರದ ಆದೇಶ ಸಂಖ್ಯೆ: ಎಫ್.ಡಿ.1 ಟಿ.ಎಫ್.ಪಿ. 96 ದಿನಾಂಕ:10.07.1996ರಲ್ಲಿ ಸರ್ಕಾರದ ಕಾರ್ಯದರ್ಶಿಯವರಿಗೆ ಪ್ರದತ್ತವಾದ ಅಧಿಕಾರದನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್. ಶಿವರಾಮ್**

ಪಿ.ಆರ್. 1219

ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ ಮತ್ತು ಸಂಸ್ಕೃತಿ, ವಾರ್ತಾ
ಮತ್ತು ಪ್ರವಾಸೋದ್ಯಮ ಇಲಾಖೆ (ಆಡಳಿತ ಕನ್ನಡ)

## ಶಿಕ್ಷಣ ಸಚಿವಾಲಯ

**ವಿಷಯ:** ನಿರ್ದೇಶಕರು, ಲೋಕ ಶಿಕ್ಷಣ ನಿರ್ದೇಶನಾಲಯ ಹಾಗೂ ನಿರ್ದೇಶಕರು, ಪದವಿ ಪೂರ್ವ ಶಿಕ್ಷಣ ಇಲಾಖೆ, ಈ ಹುದ್ದೆಗಳನ್ನು ಆಯುಕ್ತರ ಹುದ್ದೆಗಳನ್ನಾಗಿ ಮೇಲ್ದರ್ಜೆಗೇರಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಅಧಿಸೂಚನೆ ಸಂಖ್ಯೆ: ಡಿಪಿಎಆರ್ 306 ಎಸ್ಎಎಸ್ 2006, ದಿನಾಂಕ:20.06.2006.

2. ಸರ್ಕಾರದ ತಿದ್ದುಪಡಿ ಸಂಖ್ಯೆ: ಡಿಪಿಎಆರ್ 336 ಎಸ್ಎಎಸ್ 2006, ದಿನಾಂಕ:10.07.2006.

3. ಸರ್ಕಾರದ ಅಧಿಸೂಚನೆ ಸಂಖ್ಯೆ: ಡಿಪಿಎಆರ್ 603, ಎಸ್ಎಎಸ್ 2005, ದಿನಾಂಕ:06.07.2006.

4. ನಿರ್ದೇಶಕರು, ಲೋಕ ಶಿಕ್ಷಣ ನಿರ್ದೇಶನಾಲಯ, ಬೆಂಗಳೂರು ಇವರ ಪತ್ರ ಸಂಖ್ಯೆ: ಎ1/ ಡಿಎಂಇ/ 2006-07, ದಿನಾಂಕ:24.06.2006.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಅಧಿಸೂಚನೆಯ ಪ್ರಕಾರ ಪಿ.ಎ.ಎಸ್. ಅಧಿಕಾರಿಗಳನ್ನು ವರ್ಗಾವಣೆ ಮಾಡಲಾಗಿದ್ದು, ಶ್ರೀ ಕೆ. ಶಿವರಾಮು, ಇವರನ್ನು ಲೋಕ ಶಿಕ್ಷಣ ನಿರ್ದೇಶನಾಲಯ, ಬೆಂಗಳೂರು ಇಲ್ಲಿನ ನಿರ್ದೇಶಕರ ಹುದ್ದೆಗೆ ವರ್ಗಾಯಿಸಿ ನೇಮಿಸಲಾಗಿದೆ. ಮೇಲೆ ಓದಲಾದ (2)ರ ತಿದ್ದುಪಡಿಯಲ್ಲಿ ಶ್ರೀ ಕೆ. ಶಿವರಾಮು, ಇವರನ್ನು ನಿರ್ದೇಶಕರ ಹುದ್ದೆಗೆ ವರ್ಗಾಯಿಸಿರುವುದಕ್ಕೆ ಬದಲಾಗಿ ಆಯುಕ್ತರ ಹುದ್ದೆಗೆ ಎಂದು ತಿದ್ದುಪಡಿ ಮಾಡಲಾಗಿದೆ.

ಮೇಲೆ ಓದಲಾದ (3)ರ ಅಧಿಸೂಚನೆಯಲ್ಲಿ ಶ್ರೀ ಎಸ್.ಜಿ. ಹೆಗಡೆ, ನಿರ್ದೇಶಕರು, ಪದವಿ ಪೂರ್ವ ಶಿಕ್ಷಣ ಇಲಾಖೆ, ಬೆಂಗಳೂರು, ಇವರಿಗೆ ಐ.ಎ.ಎಸ್. ಆಯ್ಕೆಕಾಲಿಕ ವೇತನ ಶ್ರೇಣಿ ಹುದ್ದೆಗೆ ಸ್ಥಾನಪನ್ನ ಬಡ್ತಿ ನೀಡಿ ಇವರನ್ನು ಆಯುಕ್ತರು, ಪದವಿ ಪೂರ್ವ ಶಿಕ್ಷಣ ಇಲಾಖೆ ಮತ್ತು ವಿಶೇಷಾಧಿಕಾರಿ, ಸಾಮಾನ್ಯ ಪ್ರವೇಶ ಘಟಕ, ಬೆಂಗಳೂರು ಇಲ್ಲಿನ ಮೇಲ್ದರ್ಜೆಗೇರಿಸಿದ ಹುದ್ದೆಗೆ ಸ್ಥಳ ನಿಯುಕ್ತಿಗೊಳಿಸಿ ಆದೇಶಿಸಲಾಗಿದೆ.

ಮೇಲೆ ಓದಲಾದ (4)ರ ಪತ್ರದಲ್ಲಿ, ನಿರ್ದೇಶಕರು, ಲೋಕ ಶಿಕ್ಷಣ ನಿರ್ದೇಶನಾಲಯ, ಮಲ್ಲೇಶ್ವರಂ, ಬೆಂಗಳೂರು ಇವರು ನಿರ್ದೇಶಕರ ಹುದ್ದೆಯನ್ನು ಉನ್ನತೀಕರಿಸಿ, ಆಯುಕ್ತರ ಹುದ್ದೆಯೆಂದು ಮರುನಾಮಕರಣ ಮಾಡಿ ಆದೇಶ ಹೊರಡಿಸುವಂತೆ ಕೋರಿರುತ್ತಾರೆ. ಮೇಲಿನ ಎಲ್ಲಾ ಅಧಿಸೂಚನೆ ಹಾಗೂ ಪ್ರಸ್ತಾವನೆಗಳನ್ನು ಪರಿಶೀಲಿಸಿದ ನಂತರ ಈ ಕೆಳಕಂಡಂತೆ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಇಡಿ 315 ಡಿಪಿಐ 2006, ದಿನಾಂಕ:8ನೇ ಆಗಸ್ಟ್, 2006**

ಮೇಲೆ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ ನಿರ್ದೇಶಕರು, ಲೋಕ ಶಿಕ್ಷಣ ನಿರ್ದೇಶನಾಲಯ, ಬೆಂಗಳೂರು ಹಾಗೂ ನಿರ್ದೇಶಕರು, ಪದವಿ ಪೂರ್ವ ಶಿಕ್ಷಣ ಇಲಾಖೆ ಹಾಗೂ ಸಾಮಾನ್ಯ ಪ್ರವೇಶ ಪರೀಕ್ಷಾ ಘಟಕ, ಬೆಂಗಳೂರು ಈ ಎರಡು ಹುದ್ದೆಗಳನ್ನು ವೇತನ ಶ್ರೇಣಿ ರೂ.18400-500-22400ರ

ಆಯುಕ್ತರ ಹುದ್ದೆಗಳಿಗೆ ಮೇಲ್ದರ್ಜೆಗೇರಿಸಿ ಆಯುಕ್ತರು, ಲೋಕ ಶಿಕ್ಷಣ ನಿರ್ದೇಶನಾಲಯ ಎಂದು ಹಾಗೂ ಆಯುಕ್ತರು, ಪದವಿ ಪೂರ್ವ ಶಿಕ್ಷಣ ಇಲಾಖೆ ಎಂದು ಮರುನಾಮಕರಣ ಮಾಡಿ ಆದೇಶಿಸಿದೆ.

ಈ ಆಯುಕ್ತರ ಹುದ್ದೆಗಳು ಸದರಿ ಅಧಿಕಾರಿಗಳು ಈ ಹುದ್ದೆಗಳಲ್ಲಿ ಮುಂದುವರೆಯುವವರೆಗೆ ಮಾತ್ರ ಜಾರಿಯಲ್ಲಿರುತ್ತವೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸ್ವರ್ಣಲತಾ ಎಂ. ಭಂಡಾರೆ**

ಪಿ.ಆರ್. 1220

ಸರ್ಕಾರದ ಅಧೀನ ಕಾರ್ಯದರ್ಶಿ,
ಶಿಕ್ಷಣ ಇಲಾಖೆ (ಸೇವೆಗಳು-1,2)

## ನಗರಾಭಿವೃದ್ಧಿ ಸಚಿವಾಲಯ

### ಸೇರ್ಪಡೆ

### ಸಂಖ್ಯೆ: ನಅಇ 62 ಬೆಂರೂಪ್ರಾ 2006, ಬೆಂಗಳೂರು, ದಿನಾಂಕ:10ನೇ ಆಗಸ್ಟ್, 2006

ಸರ್ಕಾರದ ಆದೇಶ ಸಂಖ್ಯೆ: ನಅಇ 62 ಬೆಂರೂಪ್ರಾ 2006, ದಿನಾಂಕ:02.06.2006 ರಂದು ಹೊರಡಿಸಲಾದ ಆದೇಶದಲ್ಲಿ ಅನುಬಂಧ-1 ರಲ್ಲಿರುವಂತೆ ಕೆಲವು ಗ್ರಾಮಗಳನ್ನು ಸೇರಿಸಿ ಕನಕಪುರ ಯೋಜನಾ ಪ್ರಾಧಿಕಾರದ ಪರಿಷ್ಕೃತ ಸ್ಥಳೀಯ ಯೋಜನಾ ಪ್ರಾಧಿಕಾರ ಎಂದು ಘೋಷಿಸಲಾಗಿತ್ತು. ಸದರಿ ಆದೇಶಕ್ಕೆ ಸಂಬಂಧಿಸಿದಂತೆ ಈ ಕೆಳಕಂಡ ಎಂಟು ಗ್ರಾಮಗಳನ್ನು ಸೇರಿಸಿ ಓದಿಕೊಳ್ಳತಕ್ಕದ್ದು:

| ತಾಲ್ಲೂಕು | ಗ್ರಾಮ | ವಿಸ್ತೀರ್ಣ (ಹೆಕ್ಟೇರ್‌ಗಳಲ್ಲಿ) |
|---|---|---|
| ಕನಕಪುರ | ಬೆಟ್ಟಹಳ್ಳಿಕಾವಲ್ | 126.40 |
| | ಯಡಮಡು | 303.64 |
| | ದ್ಯಾವಸಂದ್ರ | 818.08 |
| | ವಡೇದೊಡ್ಡಿ | 1011.37 |
| | ರಾಮಪುರ | 1320.18 |
| | ತುಂಗಣಿ | 997.12 |
| | ಯಡೇಗೊಂಡನಹಳ್ಳಿ | 208.10 |
| | ನರಿಪುರ | 219.19 |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್.ವೈ. ಸಾಗರ**

ಪಿ.ಆರ್. 1221

ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ.

## ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ

**ವಿಷಯ:** ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷರ ಆಪ್ತ ಶಾಖೆಗೆ ಸಿಬ್ಬಂದಿಯನ್ನು ನೇಮಕ ಮಾಡುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ: ಸಂಕಇ 16 ಕೆಓಎಲ್ 2006 ದಿನಾಂಕ:07.06.2006.

2. ಸಿಆಸುಇ 162 ಶಿಸನೇ 2006 ದಿನಾಂಕ:26.06.2006.

3. ಕಾರ್ಯದರ್ಶಿ, ಕನ್ನಡ ಅಭಿವೃದ್ಧಿ ಪ್ರಾಧಿಕಾರ ಅವರ ಪತ್ರ ಸಂಖ್ಯೆ: ಕಪ್ರಾಕಾ:20/ 2006-07, ದಿನಾಂಕ:15.07.2006.

**ಪ್ರಸ್ತಾವನೆ:**

ಡಾ: ಸಿದ್ದಲಿಂಗಯ್ಯ ಅವರನ್ನು ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷರಾಗಿ ಅವರನ್ನು ಮೇಲೆ (1)ರಲ್ಲಿ ಓದಲಾದ ದಿನಾಂಕ:07.06.2006ರ ಅಧಿಸೂಚನೆಯಲ್ಲಿ ನೇಮಕ ಮಾಡಲಾಗಿದೆ. ಮೇಲೆ (2)ರಲ್ಲಿ ಓದಲಾದ ದಿನಾಂಕ:26.06.2006ರ ಅಧಿಸೂಚನೆಯಲ್ಲಿ ಡಾ: ಸಿದ್ದಲಿಂಗಯ್ಯ ಅವರಿಗೆ ದಿನಾಂಕ:12.06.2006ರಿಂದ ಜಾರಿಗೆ ಬರುವಂತೆ ಸಂಪುಟ ದರ್ಜೆ (ಕ್ಯಾಬಿನೆಟ್) ಸಚಿವರ ಸ್ಥಾನಮಾನವನ್ನು ನೀಡಲಾಗಿದೆ. ಕಾರ್ಯದರ್ಶಿ, ಕನ್ನಡ ಅಭಿವೃದ್ಧಿ ಪ್ರಾಧಿಕಾರ ಅವರು ಮೇಲೆ (3)ರಲ್ಲಿ ಓದಲಾದ ದಿನಾಂಕ:15.07.2006ರ ಪತ್ರದಲ್ಲಿ ಈ ಕೆಳಕಂಡ 6 ಮಂದಿಯನ್ನು ದಿನಾಂಕ:13.06.2006 ರಿಂದ ಜಾರಿಗೆ ಬರುವಂತೆ ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷರ ಆಪ್ತ ಶಾಖೆಯಲ್ಲಿ ಗುತ್ತಿಗೆ ಆಧಾರದ ಮೇಲೆ ಗ್ರೂಪ್ ಡಿ ಹುದ್ದೆಗೆ ನೇಮಕ ಮಾಡುವಂತೆ ಕೋರಿದ್ದಾರೆ. ಇದನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸಿದೆ.

### ಸರ್ಕಾರಿ ಆದೇಶ ಸಂಖ್ಯೆ: ಸಂಕಇ 27 ಕೆಓಎಲ್ 2006, ಬೆಂಗಳೂರು, ದಿನಾಂಕ:16ನೇ ಆಗಸ್ಟ್, 2006

ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷರ ಆಪ್ತ ಶಾಖೆಗೆ ಈ ಕೆಳಕಂಡ 6 ಮಂದಿಯನ್ನು ದಿನಾಂಕ:13.06.2006 ರಿಂದ ಜಾರಿಗೆ ಬರುವಂತೆ ಗ್ರೂಪ್-ಡಿ ನೌಕರರನ್ನಾಗಿ ನೇಮಕ ಮಾಡಲಾಗಿದೆ.

1. ಶ್ರೀ ನಾಗೇಂದ್ರ ಕೇರಾಫ್ ಮುನಿರಾಜು, ಮನೆ ನಂ.24, ಸಂಪಿಗೆ ರಸ್ತೆ, ಕುಳ್ಳಪ್ಪ ಸರ್ಕಲ್, ಮಾರುತಿ ಸೇವಾ ನಗರ, ಬೆಂಗಳೂರು-560043.
2. ಶ್ರೀ ಡಿ.ಕೆ. ಉಮೇಶ್ ಕೇರಾಫ್, ಕೃಷ್ಣಪ್ಪ, ನಂ.4/11, 4ನೇ ಮುಖ್ಯರಸ್ತೆ, 11ನೇ ಕ್ರಾಸ್, ಚೌಡಪ್ಪ ಲೇಔಟ್, ಬಾಪೂಜಿನಗರ, ಬೆಂಗಳೂರು.
3. ಶ್ರೀ ಬಿ.ಚಿಕ್ಕೇಗೌಡ ಕೇರಾಫ್ ನರಸಿಂಹಲು, ನಂ.38/6, 1ನೇ ಅಡ್ಡರಸ್ತೆ, 35ನೇ ಮುಖ್ಯ ರಸ್ತೆ, 6ನೇ ಹಂತ, ಜೆ.ಪಿ.ನಗರ, ಬೆಂಗಳೂರು-560078.
4. ಶ್ರೀ ಎಂ. ಜಾನಕಿರಾಮ್ ಕೇರಾಫ್ ಮುನಿರಂಗಯ್ಯ, ಮನೆ ನಂ.1, 17ನೇ ಹಂತ, ಕಾವೇರಿ ಸಂಕೀರ್ಣ, ಆಡುಗೋಡಿ ಪೊಲೀಸ್ ಕ್ವಾರ್ಟ್ರಸ್, ಬೆಂಗಳೂರು-560030.
5. ಶ್ರೀ ಬಷೀರ್ ಹೆಚ್ ತಂದೆ ಹುಸೇನ್‌ಸಾಬ್, ನಂ.125, 1ನೇ ಬಿ ಮುಖ್ಯ ರಸ್ತೆ, 13ನೇ ಕ್ರಾಸ್, ಮಲ್ಲತ್ತಹಳ್ಳಿ, ಬೆಂಗಳೂರು-560056.

6. ಶ್ರೀ ಪಿ.ಜಿ. ನಂಜುಂಡೇಗೌಡ ಬಿನ್ ಗಿಡ್ಡೇಗೌಡ, ನಂ.78, 1ನೇ ಮುಖ್ಯ ರಸ್ತೆ, 2ನೇ ಕ್ರಾಸ್, ಕಂಠೀರವನಗರ, ನಂದಿನಿ ಲೇಔಟ್, ಬೆಂಗಳೂರು-560014.

ಈ ನೇಮಕಾತಿಯ ಅವಧಿಯು ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷರಾದ ಡಾ: ಸಿದ್ದಲಿಂಗಯ್ಯ ಇವರು ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷರಾಗಿ ಅಧಿಕಾರದಲ್ಲಿರುವವರೆಗೆ ಅಥವಾ ಅವರು ಅದನ್ನು ಎಷ್ಟು ಸಮಯ ಮುಂದುವರಿಸಬೇಕೆಂದು ಇಚ್ಛಿಸಿರುತ್ತಾರೋ ಅಲ್ಲಿಯವರೆಗೆ ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಮಾತ್ರ ಸೀಮಿತವಾಗಿರುತ್ತದೆ.

ಈ ನೇಮಕಾತಿಗೆ ಸಂಬಂಧಿಸಿದಂತೆ ನಿಬಂಧನೆಗಳನ್ನು ಪ್ರತ್ಯೇಕವಾಗಿ ಹೊರಡಿಸಲಾಗುವುದು.

ಈ ಹುದ್ದೆಗಳಿಗೆ ತಗಲಬಹುದಾದ ವೆಚ್ಚವನ್ನು ಲೆಕ್ಕ ಶೀರ್ಷಿಕೆ 2052-00-092-0-09 ಕನ್ನಡ ಅಭಿವೃದ್ಧಿ ಪ್ರಾಧಿಕಾರ (ಯೋಜನೇತರ) ದಿಂದ ಭರಿಸುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96 ದಿನಾಂಕ:10.07.1996 ರಲ್ಲಿ ಇಲಾಖಾ ಕಾರ್ಯದರ್ಶಿಗಳಿಗೆ ಪ್ರದತ್ತವಾದ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ.ಎಸ್. ಶಿವರಾಮ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ ಮತ್ತು ಸಂಸ್ಕೃತಿ, ವಾರ್ತಾ
ಮತ್ತು ಪ್ರವಾಸೋದ್ಯಮ ಇಲಾಖೆ (ಆಡಳಿತ ಕನ್ನಡ)

ಪಿ.ಆರ್. 1222

**ವಿಷಯ:** ಶ್ರೀಮತಿ ಉಷಾಸುರೇಶ್ ನಿರ್ದೇಶಕರು ಕರ್ನಾಟಕ ರಾಜ್ಯ ಪತ್ರಾಗಾರ ಇಲಾಖೆ ಅವರಿಗೆ ತಮಿಳುನಾಡು ಪ್ರವಾಸಕ್ಕಾಗಿ ಅನುಮತಿ ನೀಡುವ ಬಗ್ಗೆ.

**ಓದಲಾಗಿದೆ:** ನಿರ್ದೇಶಕರು ಕರ್ನಾಟಕ ರಾಜ್ಯ ಪತ್ರಾಗಾರ ಇಲಾಖೆ ಅವರ ಪತ್ರ ಸಂಖ್ಯೆ: ಎಆರ್‌ಎಸ್ 9 ಎನ್‌ಎಐ 2006 ದಿನಾಂಕ:22.07.2006.

**ಪ್ರಸ್ತಾವನೆ:**

ನಿರ್ದೇಶಕರು, ಕರ್ನಾಟಕ ರಾಜ್ಯ ಪತ್ರಾಗಾರ ಇಲಾಖೆ ಅವರು ಮೇಲೆ ಓದಲಾದ ದಿನಾಂಕ:22.07.2006ರ ಪತ್ರದಲ್ಲಿ ತಮಿಳುನಾಡು ಪತ್ರಾಗಾರದಲ್ಲಿ ಕರ್ನಾಟಕಕ್ಕೆ ಸಂಬಂಧಪಟ್ಟ ದಾಖಲೆಗಳು, ವರ್ತಮಾನ ಪತ್ರಿಕೆ ಹಾಗೂ ಇತರೆ ಕಾಗದ ಪತ್ರಗಳಿದ್ದು, ಅವುಗಳನ್ನು ಪರಿಶೀಲಿಸಿ ಪರಿವೀಕ್ಷಣೆ ಕೈಗೊಂಡು ಪ್ರತಿಗಳನ್ನು ಪಡೆಯಲು ತಮಿಳುನಾಡು ಪತ್ರಾಗಾರ ಇಲಾಖೆ ಆಯುಕ್ತರನ್ನು ಖುದ್ದಾಗಿ ಭೇಟಿ ಮಾಡಬೇಕಾಗಿರುವ ಕಾರಣ ದಿನಾಂಕ:09.10.2006 ರಿಂದ 13.10.2006ರವರೆಗೆ ತಮಿಳುನಾಡು ಪ್ರವಾಸ ಕೈಗೊಳ್ಳಲು ಸರ್ಕಾರದ ಅನುಮತಿ ಕೋರಿದ್ದಾರೆ. ಇದನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಂಕಇ 10 ರಾಪಸ 2006, ಬೆಂಗಳೂರು, ದಿನಾಂಕ:17ನೇ ಆಗಸ್ಟ್, 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಉದ್ದೇಶಗಳಿಗಾಗಿ ಶ್ರೀಮತಿ ಉಷಾಸುರೇಶ್ ನಿರ್ದೇಶಕರು ಕರ್ನಾಟಕ ರಾಜ್ಯ ಪತ್ರಾಗಾರ ಇಲಾಖೆ ಅವರಿಗೆ 2006ರ ಅಕ್ಟೋಬರ್ 9 ರಿಂದ 13 ರವರೆಗೆ ತಮಿಳುನಾಡು ಪ್ರವಾಸ ಕೈಗೊಳ್ಳಲು ಅನುಮತಿ ನೀಡಲಾಗಿದೆ. ಪ್ರವಾಸದಿಂದ ಹಿಂದಿರುಗಿದ ನಂತರ ದಾಖಲೆ ಇತ್ಯಾದಿಗಳನ್ನು ಪಡೆಯಲು ಕೈಗೊಂಡ ಕ್ರಮ ಕುರಿತು ನಿರ್ದೇಶಕರು ಒಂದು ವರದಿಯನ್ನು ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ.ಎಸ್. ಶಿವರಾಮ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ ಮತ್ತು ಸಂಸ್ಕೃತಿ, ವಾರ್ತಾ
ಮತ್ತು ಪ್ರವಾಸೋದ್ಯಮ ಇಲಾಖೆ (ಆಡಳಿತ ಕನ್ನಡ)

ಪಿ.ಆರ್. 1223

## ಯೋಜನೆ ಮತ್ತು ಸಾಂಖ್ಯಿಕ ಸಚಿವಾಲಯ

**ವಿಷಯ:** ಜಿಲ್ಲಾ ಮಟ್ಟದ ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮ ಮತ್ತು 20 ಅಂಶಗಳ/ 15 ಅಂಶಗಳ ಕಾರ್ಯಕ್ರಮಗಳನ್ನು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಜಿಲ್ಲಾ ಉಸ್ತುವಾರಿ ಸಚಿವರುಗಳನ್ನು ನೇಮಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ: ಯೋಇ 14 ಯೋಎಎ 2006 ದಿನಾಂಕ:16.03.2006.
2. ಮಾನ್ಯ ಮುಖ್ಯ ಮಂತ್ರಿಯವರ ಟಿಪ್ಪಣಿ ದಿನಾಂಕ:10.08.2006.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ದಿನಾಂಕ:16.03.2006ರ ಆದೇಶದಲ್ಲಿ ಜಿಲ್ಲಾ ಮಟ್ಟದ ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮ ಮತ್ತು 20 ಅಂಶಗಳ/ 15 ಅಂಶಗಳ ಕಾರ್ಯಕ್ರಮಗಳನ್ನು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಜಿಲ್ಲಾ ಉಸ್ತುವಾರಿ ಸಚಿವರುಗಳನ್ನು ನೇಮಕ ಮಾಡಲಾಗಿದೆ.

ಮೇಲೆ ಓದಲಾದ (2)ರ ದಿನಾಂಕ:10.08.2006ರ ಟಿಪ್ಪಣಿಯಲ್ಲಿ ಮಾನ್ಯ ಮುಖ್ಯ ಮಂತ್ರಿಯವರು ಪ್ರಸ್ತುತ ಸಾಲಿನಲ್ಲಿ 27 ಜಿಲ್ಲೆಗಳ ಉಸ್ತುವಾರಿ ಸಚಿವರುಗಳನ್ನು ನೇಮಕ ಮಾಡಲು ಪ್ರಸ್ತಾವನೆಯನ್ನು ಕಳುಹಿಸಿ ಅವರುಗಳ ಹೆಸರಿನ ಮುಂದೆ ಸೂಚಿಸಿರುವ ಜಿಲ್ಲೆಯ ಉಸ್ತುವಾರಿ ಸಚಿವರುಗಳನ್ನು ನೇಮಕ ಮಾಡಲು ಆದೇಶ ಹೊರಡಿಸುವಂತೆ ಸೂಚಿಸಿರುತ್ತಾರೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಯೋಇ 14 ಯೋಎಎ 2006, ಬೆಂಗಳೂರು, ದಿನಾಂಕ:11ನೇ ಆಗಸ್ಟ್, 2006**

ಪ್ರಸ್ತಾವನೆಯಲ್ಲಿ ವಿವರಿಸಿದ ಹಿನ್ನೆಲೆಯಲ್ಲಿ ಹಿಂದೆ ಹೊರಡಿಸಲಾದ ಆದೇಶವನ್ನು ಭಾಗಶಃ ಮಾರ್ಪಡಿಸಿ ಜಿಲ್ಲಾ ಮಟ್ಟದ ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮ: 20 ಅಂಶಗಳ ಕಾರ್ಯಕ್ರಮ:15 ಅಂಶಗಳ ಕಾರ್ಯಕ್ರಮಗಳನ್ನು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಅನುಬಂಧ-1ರಲ್ಲಿ ಕಾಣಿಸಿರುವಂತೆ ಸಚಿವರುಗಳನ್ನು ಅವರುಗಳ ಹೆಸರಿನ ಮುಂದೆ ನಮೂದಿಸಿದ ಜಿಲ್ಲೆಗಳ ಜಿಲ್ಲಾ ಉಸ್ತುವಾರಿ ಸಚಿವರುಗಳನ್ನಾಗಿ ನೇಮಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಆರ್. ಶಿವಲಿಂಗಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ-1 ಮತ್ತು 2,
ಯೋಜನೆ ಮತ್ತು ಸಾಂಖ್ಯಿಕ ಇಲಾಖೆ.

**ಅನುಬಂಧ-1**

| ಕ್ರಮ ಸಂಖ್ಯೆ | ಜಿಲ್ಲೆಗಳ ಹೆಸರು | ಸಚಿವರುಗಳ ಹೆಸರು |
|---|---|---|
| 1. | ಬಾಗಲಕೋಟೆ | ಶ್ರೀ ಗೋವಿಂದ ಎಂ. ಕಾರಜೋಳ |
| 2. | ಬೆಂಗಳೂರು (ಗ್ರಾ) | ಶ್ರೀ ಹೆಚ್.ಡಿ. ಕುಮಾರಸ್ವಾಮಿ |
| 3. | ಬೆಂಗಳೂರು (ನಗರ) | ಶ್ರೀ ಆರ್. ಅಶೋಕ್ |
| 4. | ಬೆಳಗಾವಿ | ಶ್ರೀ ಕೆ. ಶಶಿಕಾಂತ್ ನಾಯಕ್ |
| 5. | ಬಳ್ಳಾರಿ | ಶ್ರೀ ಎಂ.ಪಿ. ಪ್ರಕಾಶ್ |
| 6. | ಬೀದರ್ | ಶ್ರೀ ಬಂಡೆಪ್ಪ ಕಾಶಂಪೂರ್ |
| 7. | ಬಿಜಾಪುರ | ಶ್ರೀ ಕೆ.ಎಸ್. ಈಶ್ವರಪ್ಪ |
| 8. | ಚಾಮರಾಜನಗರ | ಶ್ರೀ ಡಿ.ಟಿ. ಜಯಕುಮಾರ್ |
| 9. | ಚಿಕ್ಕಮಗಳೂರು | ಶ್ರೀ ಡಿ.ಹೆಚ್. ಶಂಕರಮೂರ್ತಿ |
| 10. | ಚಿತ್ರದುರ್ಗ | ಶ್ರೀ ಬಸವರಾಜ್ ಹೊರಟ್ಟಿ |
| 11. | ದಾವಣಗೆರೆ | ಶ್ರೀ ಎಸ್.ಎ. ರವೀಂದ್ರನಾಥ್ |
| 12. | ಧಾರವಾಡ | ಶ್ರೀ ಜಗದೀಶ್ ಶೆಟ್ಟರ್ |
| 13. | ಗದಗ | ಶ್ರೀ ಎಸ್. ಶ್ರೀರಾಮುಲು |
| 14. | ಗುಲ್ಬರ್ಗಾ | ಶ್ರೀ ಎಸ್. ದರ್ಶನಾಪುರ್ |
| 15. | ಹಾಸನ | ಶ್ರೀ ಹೆಚ್.ಡಿ. ರೇವಣ್ಣ |
| 16. | ಹಾವೇರಿ | ಶ್ರೀ ಸಿ.ಎಂ. ಉದಾಸಿ |
| 17. | ಉತ್ತರ ಕನ್ನಡ | ಶ್ರೀ ಶಿವಾನಂದ ನಾಯಕ |
| 18. | ಕೊಡಗು | ಶ್ರೀ ರಾಮಚಂದ್ರೇಗೌಡ |
| 19. | ಕೋಲಾರ | ಶ್ರೀ ಬಾಲಚಂದ್ರ ಜಾರಕೀಹೊಳಿ |
| 20. | ಕೊಪ್ಪಳ | ಶ್ರೀ ಇಕ್ಬಾಲ್ ಅನ್ಸಾರಿ |
| 21. | ಮಂಡ್ಯ | ಶ್ರೀ ಎನ್. ಚೆಲುವರಾಯಸ್ವಾಮಿ |
| 22. | ದಕ್ಷಿಣ ಕನ್ನಡ | ಶ್ರೀ ಬಿ. ನಾಗರಾಜಶೆಟ್ಟಿ |
| 23. | ಮೈಸೂರು | ಶ್ರೀ ಹೆಚ್.ಡಿ. ರೇವಣ್ಣ (ಪ್ರಭಾರ) |
| 24. | ರಾಯಚೂರು | ಶ್ರೀ ಅಲಕೋಡ್ ಹನುಮಂತಪ್ಪ |
| 25. | ಶಿವಮೊಗ್ಗ | ಶ್ರೀ ಬಿ.ಎಸ್. ಯಡಿಯೂರಪ್ಪ |
| 26. | ತುಮಕೂರು | ಶ್ರೀ ಸಿ. ಚೆನ್ನಗಪ್ಪ |
| 27. | ಉಡುಪಿ | ಶ್ರೀ ಡಾ: ವಿ.ಎಸ್. ಆಚಾರ್ಯ |

**ಆರ್. ಶಿವಲಿಂಗಯ್ಯ**
ಪಿ.ಆರ್. 1224
ಸರ್ಕಾರದ ಅಧೀನ ಕಾರ್ಯದರ್ಶಿ-1 ಮತ್ತು 2,
ಯೋಜನೆ ಮತ್ತು ಸಾಂಖ್ಯಿಕ ಇಲಾಖೆ.

## LAW, JUSTICE AND HUMAN RIGHTS SECRETARIAT

**Sub:** Re-designation of Civil Judge (Junior Division) Courts-reg.

**Read:** 1. Letter No. GOB.II.194/ 2004 Dated:24.06.2004.
2. Letter No. GOB.II./194/ 2004 Dated:20.06.2006.

**Preamble:**

In his letters read at (1) & (2) above, Registrar General, High Court of Karnataka, while indicating the civil cases pending on the file of the Courts, has requested the Government to re-designate the following Courts:

1. IV Additional Civil Judge (Junior Division), Mysore.
2. V Additional Civil Judge (Junior Division), Mysore.
3. Principal Civil Judge (Junior Division), Sagar.
4. IV Additional Civil Judge (Junior Division), Mangalore.
5. V Additional Civil Judge (Junior Division), Mangalore.
6. IV Additional District and Sessions Judge, Bijapur.

After examining the proposal, following orders are issued.

**Government Order No.LAW 66 LCE 2006, Bangalore, Dated:11th August, 2006**

Sanction is accorded to re-designate the following Courts as under:

| Sl. No. | Name of the existing Court | re-designated as |
|---|---|---|
| 1. | IV Additional Civil Judge (Junior Division), Mysore. | IV Additional Civil Judge (Junior Division) and JMFC, Mysore. |
| 2. | V Additional Civil Judge (Junior Division), Mysore | V Additional Civil Judge (Junior Division) and JMFC, Mysore. |
| 3. | Principal Civil Judge (Junior Division), Sagar. | Principal Civil Judge (Junior Division) and JMFC, Sagar. |
| 4. | IV Additional Civil Judge (Junior Division), Mangalore. | IV Additional Civil Judge (Junior Division) and JMFC, Mangalore. |
| 5. | V Additional Civil Judge (Junior Division), Mangalore. | V Additional Civil Judge (Junior Division) and JMFC, Mangalore. |
| 6. | IV Additional District and Sessions Judge, Bijapur. | III Additional District and Sessions Judge, Bijapur. |

By Order and in the name of Governor of Karnataka,
**GANGANARASAIAH**
Under Secretary to Government (Admn-1),
Law, Justice and Human Rights Department.

PR-1225

**ಸಮಾಜ ಕಲ್ಯಾಣ ಸಚಿವಾಲಯ**

**ವಿಷಯ:** ಶ್ರೀ ಹನುಮಂತು, ಹಿಂದಿನ ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿ, ಬಳ್ಳಾರಿ ಇವರ ವಿರುದ್ಧ ದಾಖಲಾದ ಲೋಕಾಯುಕ್ತ ಪ್ರಕರಣದಲ್ಲಿ ಅಭಿಯೋಜನಾ ಮಂಜೂರಾತಿ ನೀಡುವ ಬಗ್ಗೆ.

**ಓದಲಾಗಿದೆ:** 1. ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಇವರ ಪತ್ರ ಸಂಖ್ಯೆ: ಲೋಕ/ ಐಎನ್‌ವಿ(ಜಿ) ಸಿಟಿಎಲ್-10/ ಸಿಆರ್-1/ 2005/ ಬಳ್ಳಾರಿ ದಿನಾಂಕ:27.01.2006.

**ಪ್ರಸ್ತಾವನೆ:**

ಶ್ರೀ ಹನುಮಂತು, ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಯಾಗಿ ಬಳ್ಳಾರಿಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದಾಗ ಶ್ರೀ ಕೆ. ರುದ್ರಪ್ಪ, ಪ್ರಥಮ ದರ್ಜೆ ಸಹಾಯಕ, ಇವರು ಬಳ್ಳಾರಿ ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಗಳ ಕಛೇರಿಯಲ್ಲಿ ಮಾರ್ಚ್, 2003ರಿಂದ ನವೆಂಬರ್ 2004ರವರೆಗೆ ಕರ್ತವ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ಭಾರತ ಸರ್ಕಾರದ ಶಿಷ್ಯ ವೇತನದ ಹಣ ಸುಮಾರು ರೂ.10.00 ಲಕ್ಷಗಳನ್ನು ದುರುಪಯೋಗಪಡಿಸಿಕೊಂಡಿರುವುದರ ಬಗ್ಗೆ ದಿನಾಂಕ:17.08.2005 ರಂದು ತನಿಖಾಧಿಕಾರಿಗಳಿಗೆ ಬಂದ ಖಚಿತ ಮಾಹಿತಿಯ ಪ್ರಕಾರ ಆರೋಪಿಯ ವಿರುದ್ಧ ಬಳ್ಳಾರಿ ಲೋಕಾಯುಕ್ತ ಪೊಲೀಸ್ ಠಾಣೆಯಲ್ಲಿ ಗುನ್ನೆ ಸಂಖ್ಯೆ:1/ 2005ರಲ್ಲಿ ಕಲಂ 13(1)(ಸಿ) ಸಹವಾಚನ 13(2) ಪಿ.ಸಿ.ಆಕ್ಟ್ 1988 ಮತ್ತು ಕಲಂ 409 ಐ.ಪಿ.ಸಿ.ರಲ್ಲಿ ಪ್ರಕರಣವನ್ನು ದಾಖಲಿಸಿಕೊಳ್ಳಲಾಗಿದೆ.

ಪ್ರಕರಣದ ಆಪಾದಿತ ಅಧಿಕಾರಿ-2ರಾದ ಶ್ರೀ ಹನುಮಂತು, ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿ, ಬಳ್ಳಾರಿ ಇವರು ಪ್ರಭಾರಿ ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಗಳಾಗಿ ದಿನಾಂಕ:30.12.2003ರಂದು ರೂ.1,00000.00 ಗಳಿಗೆ ಚೆಕ್ ನಂ.955690 ನ್ನು ದಿನಾಂಕ:12.01.2004ರಂದು ರೂ.50,000-00 ಗಳಿಗೆ ಚೆಕ್ ನಂ.955691ನ್ನು ಮತ್ತು ದಿನಾಂಕ:28.02.2004ರಂದು ರೂ.1,50,000-00 ಗಳಿಗೆ ಚೆಕ್ ನಂ.955693 ಗಳನ್ನು ನಿಯಮಗಳಿಗೆ ವಿರುದ್ಧವಾಗಿ ಸಹಿ ಮಾಡಿ ಆಪಾದಿತ ಅಧಿಕಾರಿ-1 ಶ್ರೀ ಕೆ. ರುದ್ರಪ್ಪ ಇವರಿಗೆ ನೀಡಿದ್ದ ಚೆಕ್‌ಗಳನ್ನು ನಗದೀ ಕರಿಸಿಕೊಂಡು 5 ತಿಂಗಳ ಅವಧಿಯಲ್ಲಿ ಹಾಸ್ಟಲ್ ವಾರ್ಡನ್‌ಗಳಿಗೆ ವಿತರಿಸಿರುವುದರ ಮೂಲಕ ಈ ಹಣವನ್ನು ರುದ್ರಪ್ಪರವರು ತಾತ್ಕಾಲಿಕವಾಗಿ ದುರುಪಯೋಗ ಮಾಡಿಕೊಳ್ಳಲು ಅನುವು ಮಾಡಿಕೊಟ್ಟಿರುವುದು ಸಾಬೀತಾಗಿರುತ್ತದೆ.

ಶ್ರೀ ಹನುಮಂತು, ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿ, ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಗಳ ಕಛೇರಿಯ ತಪಾಸಣೆ ನಡೆಸದೆ, ಆಪಾದಿತ ರುದ್ರಪ್ಪರವರು ನಗದು ಪುಸ್ತಕ ಬರೆಯದೆ ಇದ್ದರೂ ಸಹ ಸರಿಯಾದ ಮೇಲ್ವಿಚಾರಣೆ ಮಾಡದೇ, ಲೆಕ್ಕಪುಸ್ತಕಗಳನ್ನು ಆಗಿಂದಾಗ್ಗೆ ಪರಿಶೀಲನೆ ಮಾಡದೆ ಸರ್ಕಾರದ ಮೊತ್ತವನ್ನು ಆಪಾದಿತ-1 ರುದ್ರಪ್ಪನವರು ದುರುಪಯೋಗ ಪಡಿಸಿಕೊಳ್ಳಲು ಕಾರಣವಾಗಿರುವುದು ಕಂಡು ಬರುತ್ತಿದೆ.

ಈ ಮೇಲ್ಕಂಡ ಕಾರಣಗಳಿಂದ ಶ್ರೀ ಹನುಮಂತು, ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿ ಇವರ ವಿರುದ್ಧದ ಭ್ರಷ್ಟಾಚಾರದ ಆರೋಪ ಮೇಲ್ನೋಟಕ್ಕೆ ಕಂಡು ಬರುವುದರಿಂದ ಸದರಿ ಅಧಿಕಾರಿಯವರನ್ನು ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಿಸಲು ಲಂಚ ನಿರೋಧ ಕಾಯಿದೆ 1988 ಕಲಂ 19 ಮತ್ತು ಸಿ ಆರ್ ಪಿಸಿ ಕಲಂ 197ರ ಪ್ರಕಾರ ಅಭಿಯೋಜನಾ ಮಂಜೂರಾತಿ ನೀಡುವಂತೆ ಓದಲಾದ ಪತ್ರದಲ್ಲಿ ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ರವರು ಕೋರಿದ್ದಾರೆ.

ಪ್ರಸ್ತಾವನೆಯನ್ನು ಕೂಲಂಕುಷವಾಗಿ, ಪರಿಶೀಲಿಸಿದ ಸಕ್ಷಮ ಪ್ರಾಧಿಕಾರವು, ತಾತ್ಕಾಲಿಕ ಹಣ ದುರುಪಯೋಗಕ್ಕೆ ಕಾರಣವಾಗಿರುವುದನ್ನು ಗಣನೆಗೆ ತೆಗೆದುಕೊಂಡು ಈ ಮುಂದಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಕಇ 254 ಪಕಸೇ 2005, ಬೆಂಗಳೂರು, ದಿನಾಂಕ:25ನೇ ಜುಲೈ, 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ ಶ್ರೀ ಹನುಮಂತು, ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿ, ಬಳ್ಳಾರಿ ಇವರನ್ನು ಅಭಿಯೋಜನೆಗೆ ಒಳಪಡಿಸಲು ಲಂಚ ನಿರೋಧ ಕಾಯ್ದೆ 1988 ಕಲಂ 19 ಮತ್ತು ಸಿ.ಆರ್.ಪಿ.ಸಿ. ಕಲಂ 197ರ ಪ್ರಕಾರ ಸರ್ಕಾರ ಈ ಮೂಲಕ ಅಭಿಯೋಜನಾ ಮಂಜೂರಾತಿಯನ್ನು ನೀಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಹೆಚ್. ಶೇಖರಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಮಾಜ ಕಲ್ಯಾಣ ಇಲಾಖೆ.

ಪಿ.ಆರ್.1226

## ಕಂದಾಯ ಸಚಿವಾಲಯ

**ವಿಷಯ:** ಶ್ರೀ ಎಸ್.ಎಂ. ಪಡಶೆಟ್ಟಿ, ಹಿಂದಿನ ತಹಶೀಲ್ದಾರ್, ಬಿಜಾಪುರ ಹಾಲಿ ನಿವೃತ್ತರು, ಇವರ ವಿರುದ್ಧ ಇಲಾಖಾ ವಿಚಾರಣೆ-ದೋಷಮುಕ್ತರನ್ನಾಗಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ: ಆರ್‌ಡಿ: 15:ಎಡಿಇ 2004, ದಿನಾಂಕ:16.03.2005.
2. ದಿನಾಂಕ:04.04.2006ರ ವಿಚಾರಣಾಧಿಕಾರಿಗಳ ವರದಿ.

**ಪ್ರಸ್ತಾವನೆ:**

ಶ್ರೀ ಎಸ್.ಎಂ. ಪಡಶೆಟ್ಟಿ, ಹಿಂದಿನ ತಹಶೀಲ್ದಾರ್, ಬಿಜಾಪುರ ತಾಲ್ಲೂಕು ಹಾಲಿ ನಿವೃತ್ತರು, ಇವರು ಸದರಿ ತಾಲ್ಲೂಕಿನ ತಹಶೀಲ್ದಾರರಾಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಶ್ರೀ ಕೊಂಡಿಬಾ ಕುಸೇಬಾ ಸಿಂದೆ, ಸಾ:ಖಿಲಾರಹಟ್ಟಿ, ತಾಲ್ಲೂಕು ಬಿಜಾಪುರ ಇವರಿಗೆ ಕಾಡು ಕುರುಬ ಜಾತಿಗೆ ಪ್ರಮಾಣ ಪತ್ರ ನೀಡಿರುವಲ್ಲಿ ಕರ್ತವ್ಯ ಲೋಪವೆಸಗಿರುತ್ತಾರೆಂದು ಸದರಿಯವರ ವಿರುದ್ಧ ಇಲಾಖಾ ವಿಚಾರಣೆ ಜರುಗಿಸಲು ಮೇಲೆ ಕ್ರ.ಸಂಖ್ಯೆ:1ರಲ್ಲಿ ಓದಲಾದ ದಿನಾಂಕ:16.03.2005ರ ಆದೇಶದಲ್ಲಿ ಶ್ರೀ ಕುಲಕರ್ಣಿ ರಾಮರಾವ್, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಇವರನ್ನು ವಿಚಾರಣಾಧಿಕಾರಿಗಳನ್ನಾಗಿ ನೇಮಿಸಲಾಗಿತ್ತು. ಹಾಗೂ ಶಿಸ್ತು ಪ್ರಾಧಿಕಾರಿಯವರ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿ ಮುಂದೆ ಮಂಡಿಸಲು ಬಿಜಾಪುರ ಜಿಲ್ಲಾಧಿಕಾರಿಗಳ ಕಛೇರಿಯ ಕೇಂದ್ರಸ್ಥಾನಿಕ ಸಹಾಯಕರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಲಾಗಿತ್ತು.

ವಿಚಾರಣಾಧಿಕಾರಿಯವರು ಈ ಪ್ರಕರಣದಲ್ಲಿ ಇಲಾಖಾ ವಿಚಾರಣೆ ಜರುಗಿಸಿ ಮೇಲೆ ಕ್ರ.ಸಂ.2 ರಲ್ಲಿ ಓದಲಾದ ದಿನಾಂಕ:04.04.2006ರ ಪತ್ರದೊಂದಿಗೆ ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿದ್ದು ಅದರಲ್ಲಿ ಶ್ರೀ ಎಸ್.ಎಂ. ಪಡಶೆಟ್ಟಿ ಇವರ ವಿರುದ್ಧ ಹೊರಿಸಲಾದ ಆರೋಪಗಳು ಸಾಬೀತಾಗಿಲ್ಲವೆಂದು ವರದಿ ಮಾಡಿರುತ್ತಾರೆ.

ವಿಚಾರಣಾಧಿಕಾರಿಗಳು ಸರ್ಕಾರಕ್ಕೆ ಸಲ್ಲಿಸಿದ್ದ ವಿಚಾರಣಾ ವರದಿ ಹಾಗೂ ಅದಕ್ಕೆ ಸಂಬಂಧಪಟ್ಟ ದಾಖಲೆಗಳನ್ನು ಪರಿಶೀಲಿಸಿ ಸರ್ಕಾರವು ವಿಚಾರಣಾಧಿಕಾರಿಗಳ ವಿಚಾರಣಾ ವರದಿಯನ್ನು ಒಪ್ಪಿಕೊಂಡು ಶ್ರೀ ಎಸ್.ಎಂ. ಪಡಶೆಟ್ಟಿ, ಹಿಂದಿನ ತಹಶೀಲ್ದಾರ್, ಬಿಜಾಪುರ ಇವರ ವಿರುದ್ಧದ ಆರೋಪಗಳು ಸಾಬೀತಾಗದಿರುವುದು ಸ್ಪಷ್ಟವಾಗಿರುವುದರಿಂದ ಅವರನ್ನು ಆರೋಪಮುಕ್ತರನ್ನಾಗಿಸಲು ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ:15:ಎಡಿಇ:2004, ಬೆಂಗಳೂರು, ದಿನಾಂಕ:10ನೇ ಆಗಸ್ಟ್, 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಶ್ರೀ ಎಸ್.ಎಂ. ಪಡಶೆಟ್ಟಿ, ಹಿಂದಿನ ತಹಶೀಲ್ದಾರ್, ಬಿಜಾಪುರ ಹಾಲಿ ನಿವೃತ್ತಿ ಇವರ ವಿರುದ್ಧ ಸರ್ಕಾರದ ಆದೇಶ ಸಂಖ್ಯೆ: ಆರ್.ಡಿ. 15: ಎಡಿಇ 2004 ದಿನಾಂಕ:16.03.2005ರ ಆದೇಶದಲ್ಲಿ ಹೊರಿಸಲಾದ ಆರೋಪಗಳಿಂದ ಮುಕ್ತಗೊಳಿಸಿ ಆದೇಶಿಸಲಾಗಿದೆ.

ಈ ಪ್ರಕರಣದ ಮಟ್ಟಿಗೆ ಸಂಬಂಧಿಸಿದಂತೆ ಮೇಲ್ಕಂಡ ಅಧಿಕಾರಿಯವರ ವಿರುದ್ಧ ಈ ಇಲಾಖಾ ವಿಚಾರಣೆಯು ನಡೆಯದಿದ್ದಲ್ಲಿ ಅವರು ಯಾವ ಸೌಲಭ್ಯಗಳನ್ನು ಪಡೆಯಲು ಅರ್ಹರಾಗಿರುತ್ತಿದ್ದರೋ ಅಂತಹ ಸೇವಾಸೌಲಭ್ಯಗಳನ್ನು ಪಡೆಯಲು ಅರ್ಹರಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ಶ್ರೀಮತಿ ಚಂದ್ರಶೇಖರ್**

ಪಿ.ಆರ್.1227

ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಸೇವೆಗಳು-3)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಕರ್ನಾಟಕ ಸರ್ಕಾರ ಸಚಿವಾಲಯದ ವಿವಿಧ ಇಲಾಖೆಗಳ ಕಾನೂನು ಕೋಶಗಳ ಕಾರ್ಯ ಮರು ಹಂಚಿಕೆ ಬಗ್ಗೆ.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 92 ಸಅಸೇ 2005, ದಿನಾಂಕ:21.04.2005.
2. ಅಧಿಸೂಚನೆ ಸಂಖ್ಯೆ: ಸಿಆಸುಇ 84 ಸಸಿವಿ 2004, ದಿನಾಂಕ:26.09.2005.
3. ಅನಧಿಕೃತ ಟಿಪ್ಪಣಿ ಸಂಖ್ಯೆ: ಲಾ 5805 ಎಎಲ್‌ಎಸ್-1/ 05 ದಿನಾಂಕ:08.06.2006 ಹಾಗೂ 10.07.2006.

**ಪ್ರಸ್ತಾವನೆ:**

ಮೇಲೆ ಕ್ರಮಸಂಖ್ಯೆ (1) ರಲ್ಲಿ ಓದಲಾದ ದಿನಾಂಕ:21.04.2005ರ ಸರ್ಕಾರಿ ಆದೇಶದಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯದ ವಿವಿಧ ಇಲಾಖೆಗಳ ಕಾನೂನು ಕೋಶಗಳ ಕಾರ್ಯಭಾರವನ್ನು ಮರು ಹಂಚಿಕೆ ಮಾಡುವ ಬಗ್ಗೆ ಆದೇಶವನ್ನು ಹೊರಡಿಸಲಾಗಿದ್ದಿತು. ಕ್ರಮಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ:26.09.2005ರ ಅಧಿಸೂಚನೆಯಲ್ಲಿ ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆಯ ಕಾನೂನು ಕೋಶವನ್ನು ಒಳಾಡಳಿತ ಮತ್ತು ಸಾರಿಗೆ ವಾರ್ತಾ ಪ್ರವಾಸೋದ್ಯಮ ಮತ್ತು ಯುವಜನ ಸೇವೆ ಹಾಗೂ ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆಗಳ ಕಾನೂನು ಕೋಶ ಎಂದು ಮರು ಪದನಾಮೀಕರಿಸಲಾಗಿರುತ್ತದೆ.

ಸರ್ಕಾರದ ಕಾರ್ಯದರ್ಶಿ, ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ ಇವರು ಮೇಲೆ ಕ್ರಮಸಂಖ್ಯೆ: (3)ರಲ್ಲಿ ಓದಲಾದ ಅನಧಿಕೃತ ಟಿಪ್ಪಣಿಗಳಲ್ಲಿ ಕಾನೂನು ಕೋಶಗಳ ಕಾರ್ಯ ಮರುಹಂಚಿಕೆ ಬಗ್ಗೆ ದಿನಾಂಕ:07.06.2006ರಂದು ನಡೆದ ಸಭೆಯ ನಡವಳಿಗಳಲ್ಲಿ ಶಿಫಾರಸ್ಸು ಮಾಡಿರುವಂತೆ ವಿವಿಧ ಇಲಾಖೆಗಳ ಕಾನೂನು ಕೋಶಗಳ ನಡುವಿನ ಕಾರ್ಯಭಾರವನ್ನು ಈ ಕೆಳಕಂಡಂತೆ ಮರುಹಂಚಿಕೆ ಮಾಡುವ ಬಗ್ಗೆ ಪರಿಷ್ಕೃತ ಆದೇಶವನ್ನು ಹೊರಡಿಸುವಂತೆ ಕೋರಿರುತ್ತಾರೆ.

| ಕ್ರಮ ಸಂಖ್ಯೆ | ಪ್ರಸ್ತುತ ಇರುವ ಕಾನೂನು ಕೋಶಗಳ ಕಾರ್ಯವ್ಯಾಪ್ತಿ | ಪುನರ್ ಸಂಘಟಿಸಲು ಸೂಚಿಸಲಾಗಿರುವ ಕಾನೂನು ಕೋಶಗಳ ಕಾರ್ಯವ್ಯಾಪ್ತಿ |
|---|---|---|
| 1. | ಒಳಾಡಳಿತ ಸಾರಿಗೆ, ವಾ.ಪ್ರಾ.ಯು.ಸೇ. ಹಾಗೂ ವಾ. ಮತ್ತು ಕೈ. ಇಲಾಖೆಗಳು. | ಒಳಾಡಳಿತ ಮತ್ತು ಸಾರಿಗೆ, ವಾ. ಮತ್ತು ಕೈ. ಹಾಗೂ ಯುವಜನ ಸೇವಾ ಇಲಾಖೆಗಳು. |
| 2. | ಕೃ. ಮತ್ತು ತೋ. ಸಹಕಾರ, ಪ.ಸಂ.ಮೀ. ಮತ್ತು ಅ.ಪ.ಜೀ. ಇಲಾಖೆ. | ಕೃ. ಮತ್ತು ತೋ. ಸಹಕಾರ ಹಾಗೂ ಪ.ಸಂ.ಮೀ. ಇಲಾಖೆಗಳು. |
| 3. | ಉನ್ನತ ಶಿಕ್ಷಣ ಹಾಗೂ ಪ್ರಾಥಮಿಕ ಶಿಕ್ಷಣ ಇಲಾಖೆಗಳು. | ಉನ್ನತ ಶಿಕ್ಷಣ, ವೈದ್ಯಕೀಯ ಶಿಕ್ಷಣ ಹಾಗೂ ಆ.ಕು.ಕ. ಇಲಾಖೆಗಳು. |
| 4. | ವಸತಿ, ನಗರಾಭಿವೃದ್ಧಿ ಹಾಗೂ ಇಂಧನ ಇಲಾಖೆಗಳು. | ವಸತಿ, ನಗರಾಭಿವೃದ್ಧಿ, ಇಂಧನ ಹಾಗೂ ಅ.ಪ.ಜೀ. ಇಲಾಖೆ. |

